# ಅಚಲ

18

ಬಿಡಿಪ್ರತಿ : 4 ರೂ.

ತಿಂಗಳ ಪತ್ರಿಕೆ

ಸೆಪ್ಟೆಂಬರ್ - 2006

## ಒಳಗೇನಿದೆ







ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ,

ಬೆಂಗಳೂರು

# ಅಚಲ

ಸಂಪುಟ - 21  ಸಂಚಿಕೆ : 9

*ಸಂಪಾದಕ ಮಂಡಳಿ*

ಎನ್. ಗಾಯತ್ರಿ
ನೇಮಿಚಂದ್ರ, ದೇವಿ,
ಶಾಂತಾ ನಾಗರಾಜ್
ಹೆಚ್. ಎನ್. ಗೀತಾ
ಹೇಮಲತಾ ಮಹಿಷಿ

*ಪ್ರಕಾಶಕರು*

ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ
ಬೆಂಗಳೂರು


ಚಂದಾ ಹಣವನ್ನು ಚೆಕ್‌ನಲ್ಲಿ ಕಳುಹಿಸುವವರು ಬ್ಯಾಂಕ್ ಕಮೀಷನ್ ಸೇರಿಸಿ ಕಳುಹಿಸಬೇಕು. ಎಂ. ಓ. ಫಾರ್ಮಿನ ಕೊನೆಯ ಭಾಗದಲ್ಲಿ ಹೆಸರು ವಿಳಾಸಗಳನ್ನು ಸ್ಪಷ್ಟವಾಗಿ ನಮೂದಿಸಬೇಕು. ಬದಲಾದ ವಿಳಾಸವನ್ನು ದಯವಿಟ್ಟು ಬರೆದು ತಿಳಿಸಿ.


**Achala - Edited by Dr. N. Gayathri**

**Published by Dr. G. Ramakrishna on behalf of Jagruthi Mahila Adhyayana Kendra**

**Printed at**
Lipi Mudrana
**Bangalore - 560 004**


''ಜಪಾನಿನಲ್ಲಿ ನನ್ನ ಗಮನ ಸೆಳೆದ ಇನ್ನೊಂದು ಪ್ರಮುಖ ಸಂಗತಿಯೆಂದರೆ ಕ್ರಿ.ಶ. 1900ರ ಹೊತ್ತಿಗೆ ಅಲ್ಲಿ ನಡೆದ ಮಹಿಳಾ ಶೈಕ್ಷಣಿಕ ಪ್ರಗತಿ. ಆಗಲೇ ಆದೇಶದಲ್ಲಿ ಶಾಲೆಗೆ ಹೋಗುತ್ತಿದ್ದ ಹೆಣ್ಣು ಮಕ್ಕಳ ಸಂಖ್ಯೆ ಒಂದೂವರೆ ದಶಲಕ್ಷ. ಆಗಿನ ಸಂದರ್ಭದಲ್ಲೇ ಭಾರತದ ಜನಸಂಖ್ಯೆ ಜಪಾನಿಗಿಂತ ಅತ್ಯಧಿಕ ! ಆದರೂ ನಮ್ಮ ಇಡೀ ಭರತ ಖಂಡದಲ್ಲಿ ಕೇವಲ ನಾಲ್ಕು ಲಕ್ಷ ಹೆಣ್ಣು ಮಕ್ಕಳು ಶಾಲೆಗೆ ಹೋಗುತ್ತಿದ್ದರು ! ಅವರಲ್ಲೂ ವಿದ್ಯೆಯನ್ನು ಅರ್ಧಕ್ಕೆ ಬಿಡುವವರ ಸಂಖ್ಯೆಯೇ ಅಧಿಕ ! ವಿದೇಶಿಯರು ಶಿಕ್ಷಣಕ್ಕೆ ನೀಡುವ ಮಹತ್ವವನ್ನು ಕಂಡು ನಾನು ಪ್ರಭಾವಿತನಾಗುತ್ತೇನೆ. ಅನರಕ್ಷತೆಯೇ ನಮ್ಮ ದೇಶದ ಆರ್ಥಿಕ ಅವನತಿಗೆ ಮೂಲ ಕಾರಣವಾಗಿದೆ.''

- ಸರ್ ಎಂ. ವಿಶ್ವೇಶ್ವರಯ್ಯ
(ನನ್ನ ವೃತ್ತಿ ಜೀವನದ ನೆನಪುಗಳು - ಕೃತಿಯಲ್ಲಿ)


ಅಚಲ ವಿಳಾಸ

**108, ಸ್ಕೈಲೈನ್ ಸುರಭಿ, 14-ಏ, ವಿದ್ಯಾಪೀಠ ರಸ್ತೆ, ಬನಶಂಕರಿ 3ನೇ ಹಂತ, ಬೆಂಗಳೂರು - 560 085**

ಸಂಪಾದಕೀಯ

# ನ್ಯಾಯಕ್ಕಾಗಿ ಕಾದಿರುವ ಮತ್ತೊಬ್ಬ ಬಾಂವ್ರಿ

ಭಾಂವ್ರಿದೇವಿಯ ಮೇಲಿನ ಅತ್ಯಾಚಾರದ ಪ್ರಕರಣ ನಡೆದು ಒಂದು ದಶಕವೇ ಕಳೆದು ಹೋಗಿದೆ. ಆದರೆ ಹೆಣ್ಣಿಗೆ ಅತ್ಯಾಚಾರದಿಂದಾಗುವ ನೋವು, ಅಪಮಾನಗಳನ್ನು ಕುರಿತಂತೆ ನಾಗರೀಕ ಸಮಾಜದ ದೃಷ್ಟಿಕೋನ ಮಾತ್ರ ಬದಲಾಗಿಲ್ಲ. ಕೆಲವು ತಿಂಗಳ ಹಿಂದಷ್ಟೇ ಮಾವನಿಂದ ಅತ್ಯಾಚಾರಕ್ಕೊಳಗಾಗಿದ್ದಕ್ಕೆ ಮಾವನನ್ನೇ ಮದುವೆಯಾಗಬೇಕೆಂಬ ಧಾರ್ಮಿಕ ಕಟ್ಟಲೆಗೆ ಗುರಿಯಾದ ಸೊಸೆ ಇಮ್ರಾನ್‌ಳ ನಾಡಿನಲ್ಲೇ ಈಗ ಮತ್ತೊಂದು ಹತಭಾಗಿನಿ ಗುಂಪು ಅತ್ಯಾಚಾರಕ್ಕೆ ಒಳಗಾಗಿದ್ದಾಳೆ.

ರಾಜಸ್ಥಾನದ ಕರೋಲಿ ಜಿಲ್ಲೆಯ ಕಟ್‌ಕರ್ ಹಳ್ಳಿಯಲ್ಲಿ ಲಾಚೋ 'ಸಹಯೋಗಿನಿ' ತರಬೇತಿ ಪಡೆಯುತ್ತಿದ್ದಳು. ಮಹಿಳೆ ಮತ್ತು ಮಕ್ಕಳ ಕಲ್ಯಾಣ ಇಲಾಖೆಯ ICDS ಕಾರ್ಯಕ್ರಮದಲ್ಲಿ ಭಾಗವಹಿಸಿದ್ದ ಇವಳಿಗೆ ಅವಳ ಇಲಾಖೆಯವಳೇ ಆದ ದಯಾವತಿ ಡಿಸೆಂಬರ್ 30, 2005 ರಂದು ಅವಳ ಬಳಿಗೆ ಬಂದು ಅವಳನ್ನು ರಾಮ್ ವಿಲಾಸ್ ಮದುವೆಯ ಹಾಲ್‌ಗೆ ಕರೆದುಕೊಂಡು ಹೋದಳು. ಅಲ್ಲಿ ಅವಳಿಗೆ ಚೆನ್ನಾಗಿ ನಶೆ ಬರುವಂತಹ ಮದ್ದುಗಳನ್ನು ತಿನ್ನಿಸಲಾಯಿತು. ಅವರ ಇಲಾಖೆಯ ಮೂವರು ಸೂಪರ್‌ವೈಸರ್‌ಗಳು ಅಲ್ಲಿಗೆ ಬಂದು ಅವಳ ಮೇಲೆ ಗುಂಪು ಅತ್ಯಾಚಾರವನ್ನು ನಡೆಸಿ ನಂತರ ಅವಳನ್ನು ಹತ್ತಿರದ ಆಸ್ಪತ್ರೆಯಲ್ಲಿ ಬಿಟ್ಟು ಹೋಗಿದ್ದರು.

ಅತ್ಯಾಚಾರಕ್ಕೊಳಗಾದ ಹೆಣ್ಣು ಮಗಳೊಬ್ಬಳು ಸಮಾಜದಲ್ಲಿ ಎದುರಿಸಬೇಕಾದ ಸಂಕಷ್ಟಗಳ ಸರಮಾಲೆಗೆ ಲಾಚೋ ಪ್ರಕರಣ ಒಂದು ಉತ್ತಮ ನಿದರ್ಶನ. ಹೆಂಡತಿಯ ದುಃಸ್ಥಿತಿಯನ್ನು ಕಂಡ ಗಂಡ ಪೋಲಿಸ್ ಠಾಣೆಗೆ ದೂರು ದಾಖಲಿಸಲು ಹೋದಾಗ ಅಲ್ಲಿ ದೂರು ದಾಖಲಿಸಿಕೊಳ್ಳಲು ನಿರಾಕರಿಸಲಾಯಿತು. ಆದರೂ ಆ ಊರಿನ ಎನ್.ಜಿ.ಓಗಳ ಮತ್ತು ಸಾಮಾಜಿಕ ಕಾರ್ಯಕರ್ತರ ಎಡಬಿಡದ ಒತ್ತಾಯದಿಂದಾಗಿ ಕೊನೆಗೆ ದೂರು ದಾಖಲಿಸಿಕೊಳ್ಳಲೇಬೇಕಾಯಿತು. ಜೈಪುರಕ್ಕೆ ಲಾಚೋಳನ್ನು ಕರೆದುಕೊಂಡು ಬರಬೇಕಾದಾಗಲೂ ಅವಳು ತುಂಬ ಕೆಟ್ಟ ಸ್ಥಿತಿಯಲ್ಲಿದ್ದಳು. ಮಾನಸಿಕವಾಗಿ ಜರ್ಝರಿತಳಾಗಿದ್ದಳು. ಅವಳಿಗೆ ತಲೆ ಸರಿಯಿಲ್ಲವೆಂದರು. ವೈದ್ಯರು ಅವಳ ಸ್ಥಿತಿಯ ಬಗ್ಗೆ ನೀಡಿದ ವರದಿಯಲ್ಲಿ ದೊಡ್ಡ ದೊಡ್ಡ ವೈದ್ಯಕೀಯ ಪದಗಳು ಇದ್ದವು-ರಿಯಾಕ್ಟಿವ್ ಡಿಪ್ರೆಷನ್, ಹೈಪೊಥೈರಾಯ್ಡಿಸಮ್ ಎಂದಿತ್ತೇ ಹೊರತು ಅವಳನ್ನು ಅತ್ಯಾಚಾರಕ್ಕೆ ಗುರಿಯಾದವಳೆಂದು ಗುರುತಿಸಿರಲಿಲ್ಲ.

ಎರಡು ಗಂಡು ಮಕ್ಕಳ ತಾಯಿಯಾದ ಲಾಚೋಗೆ ಅತ್ಯಾಚಾರವಾಗುವ ಸಂದರ್ಭದಲ್ಲಿ ಎದೆ ಹಾಲು ಕುಡಿಯುವ ಕೂಸಿತ್ತು. ಈ ಘಟನೆಯಾದ ಸುಮಾರು ಆರು ತಿಂಗಳ ನಂತರ ಆ ಮಗುವೂ ಕಣ್ಣು ಮುಚ್ಚಿತು. ಆ ಮಗು ಸತ್ತದಿನ ಅವಳು ಸೆಷನ್ ಜಡ್ಜ್ ಮುಂದೆ ಹಾಜರಾಗಬೇಕಿತ್ತು. ನ್ಯಾಯಾಲಯದಲ್ಲಿ ಅವಳ ಗೈರುಹಾಜರಿಗೆ ಕಾರಣವನ್ನು ಹೇಳಿದಾಗಲು ಆ ನ್ಯಾಯಾಧೀಶರ ಮನಸ್ಸು ಕರಗದೆ ಅವಳ ಸಾಕ್ಷ್ಯ ಮುಗಿಯಿತೆಂದು ಪ್ರಕಟಿಸಿದರು. ಇಷ್ಟು ಸಾಲದೆನ್ನುವಂತೆ ಅವಳ ಮಾಸ್ತರಿಣಿ ಪ್ರತಿ ನಿತ್ಯ ಅವಳ ಬಳಿಗೆ ಬಂದು, ಈ ಕೋರ್ಟು ಕಛೇರಿಯ ರಗಳೆಯೇಕೆ ? ಸುಮ್ಮನೆ ಆರೋಪಿಗಳು ನೀಡುವ ಐದು ಲಕ್ಷ ರೂ. ಗಳನ್ನು ಹಿಂದಕ್ಕೆ ಪಡೆದುಕೊಂಡು ಕೇಸು ಹಿಂದಕ್ಕೆ ಪಡೆಯಲು ಒತ್ತಾಯ ಬೇರೆ ಮಾಡುತ್ತಿದ್ದಳು. ಪರಿಶಿಷ್ಟ ಜಾತಿ/ಪಂಗಡಗಳವರ ಮೇಲಿನ ಅತ್ಯಾಚಾರ ನಿಷೇಧ (ನಿಯಮ 12(4) ಕಾಯಿದೆಯನ್ವಯ ಅವಳಿಗೆ ಪರಿಹಾರರೂಪವಾಗಿ ಒಂದು ಲಕ್ಷ ರೂಪಾಯಿಗಳ ಹಣ ಬರಬೇಕಾಗಿದೆ. ಆದರೆ ಇಲ್ಲಿಯವರೆಗೆ ಅವಳು ಪಡೆದಿರುವ ಹಣ ಕೇವಲ 25,000/-. ಉಳಿದ ಹಣಕ್ಕಾಗಿ ಅವಳು ನೀಡಿರುವ ಅರ್ಜಿಗೆ ಯಾವುದೇ ಉತ್ತರವಿಲ್ಲ.

ಈ ಎಲ್ಲ ನೋವು, ಸಂಕಟಗಳ ನಡುವೆಯೂ ಲಾಚೋಳಿಗೆ ಇರುವ ಶ್ರೀರಕ್ಷೆಯೆಂದರೆ ಅವಳ ಗಂಡ ಮತ್ತು ಅತ್ತೆ, ನೋವಿನ ನೆರಳಿನಲ್ಲಿ ಬದುಕು ತಳ್ಳುತ್ತಿರುವ ಈ ಕುಟುಂಬಕ್ಕೆ ಹೇಗಾದರು ಹೋರಾಡಿ ನ್ಯಾಯ ಪಡೆಯಬೇಕೆಂಬ ಛಲವಿದೆ. ಹೆಚ್ಚೆಂದರೆ ದಿನಕ್ಕೆ ಅರವತ್ತು ರೂಪಾಯಿಗಳ ವರಮಾನವಿರುವ ಅವಿದ್ಯಾವಂತ, ಹಳ್ಳಿಗಾಡಿನ ಈ ಕುಟುಂಬಕ್ಕೆ 5 ಲಕ್ಷ ರೂ.ಗಳ ಆಮಿಷ ಮತ್ತು ಸಾಮಾಜಿಕ ಮತ್ತು ರಾಜಕೀಯ ಒತ್ತಡಗಳನ್ನು ತಡೆದುಕೊಳ್ಳಲು ಶಕ್ತಿಯಿದೆಯೇ ಎಂದು ನಮಗೆ ಅನಿಸಬಹುದು. ಹೆಣ್ತನದ ಸ್ವಾಭಿಮಾನ ಮತ್ತು ಗೌರವದ ಮುಂದೆ ಈ ಎಲ್ಲ ಆಮಿಷಗಳೂ ತೃಣ ಸಮಾನ ಎಂದು ಭಾವಿಸಿರುವ ಈ ಕುಟುಂಬ ಹೋರಾಟದ ಹಾದಿಯಲ್ಲಿದೆ. ಸೊಸೆಯ ಮೇಲಾದ ಅತ್ಯಾಚಾರ, ಮೊಮ್ಮಗುವಿನ ಅಕಾಲ ಸಾವಿನ ಸುದ್ದಿಯಿಂದ ಜರ್ಝರಿತಳಾದರೂ ಅವಳ ಅತ್ತೆ ತನ್ನ ಸೊಸೆಯನ್ನು ಬೆಂಬಲಿಸುತ್ತಾ ಹೋರಾಟ ಹಾದಿಯತ್ತ ಮುಖಮಾಡಿದ್ದಾಳೆ. ಈ ಹೋರಾಟದ ಹಾದಿ ಎಷ್ಟೊಂದು ಕಷ್ಟ ಎಂಬುದನ್ನು ಭಾಂವ್ರಿದೇವಿಯ ಪ್ರಕರಣ ಸ್ಪಷ್ಟಪಡಿಸಿದೆ. ಭಾಂವ್ರಿಯ ಪ್ರಕರಣದ ನಂತರ ಇಡೀ ದೇಶದ ದುಡಿಯುವ ಮಹಿಳಾ ಸಮುದಾಯಕ್ಕೆ ಲೈಂಗಿಕ ದೌರ್ಜನ್ಯದ ವಿರುದ್ಧವಾಗಿ ಶಾಸನದ ರಕ್ಷೆ ಸಿಕ್ಕಿದೆ. ಆದರೆ ಭಾಂವ್ರಿದೇವಿಗೆ ನ್ಯಾಯ ಸಿಕ್ಕಿಲ್ಲ. ಹೀಗಿರುವಾಗ ಲಾಚೋಳ ಸರದಿ ಯಾವಾಗಲೋ ! ಲಾಚೋಳ ನ್ಯಾಯಕ್ಕಾಗಿನ ಹೋರಾಟದಲ್ಲಿ ಎಲ್ಲ ಮಾನವೀಯ ಹೃದಯಗಳೂ ಕೈಗೂಡಿಸಬೇಕಿದೆ.

– ಎನ್. ಗಾಯತ್ರಿ

# ಭೀಕರ ಪಾರುಪತ್ಯ

– ಶ್ಯಾಮಲಾದೇವಿ ಬೆಳಗಾಂವ್‌ಕರ್

"ಲಕ್ಷ್ಮೀ, ಏನಾಗೇತಿ ಹೇಳು, ಬರೇ ಅತ್ತರೆ ನಾಯೇನಂತ ತಿಳೀಲಿ? ಅವ್ವ ಏನರ ಅಂದ್ಲೋ, ಅಪ್ಪ ಏನರ ಮಾತಾಡಿದ್ನೋ, ಇಲ್ಲಾ ಹುಡುಗರೇನಾರ ಬೇಡಿ ಕಾಡಿದವೋ....?"

"ಇಲ್ಲಾ, ನಿಮ್ಮ ತಾಯೀ-ತಂದೀ ಅಂದ್ರೆ ನನ್ನ ಹಡೆದ ತಾಯೀ-ತಂದೀ ಇದ್ದಾಂಗS ಅದಾರ ನನ್ನ ಸಂಗಾಟ, ಹುಡುಗರೂ ಅಂಥಾ ಹಿರೇರ ಮೊಮ್ಮಕ್ಕಳು....ಭಾಳ ಸನ್ಮಂತಾಗಿ ಅದಾರ. ಯಾರೂ ಏನೂ ಮಾಡಿಲ್ಲ ನನಗೆ ಆದರ....ಆದರ...."

"ನಿಂದರ್ತಿ ಯಾಕ ಮತ್ತ? ಆದರ–ಮುಂದೇನಾತು ಹೇಳು. ರಾತ್ರಿ ಭಾಳಾಗ್ಯೆತಿ, ನಿದ್ದೀ ಮಾಡೂನು. ಗಡಾನ ಎದ್ದು ಮತ್ತ ನನಗೆ ಸರ್ವೀಸ ಮ್ಯಾಗ ಹಾಜರಾಗಬೇಕು."

ಕಣ್ಣೊರೆಸಿಕೊಳ್ಳುತ್ತಾ ಲಕ್ಷ್ಮಿಯು, "ಇಲ್ಲಾ, ದಿನಾ ಬರೋಹಾಂಗ ಇಂದೂ ಅವರು ಬಂದಿದ್ರೂ, ಆಟ ಚಾ ಮಾಡಿಕೊಟ್ಟೇ....ಈಗ ಐದಾರು ದಿನದಿಂದನೋ, ಎಲ್ಲಾರ ನನಗೆ ಕಣ್ಣೂ ಹುಬ್ಬೂ ಚಿವುಟಿತಿದ್ರಂತ ನಿನ್ನೇ ನಾ ನಿಮಗೆ ಹೇಳಿಲ್ಲS!....ಇಂದ ಅದರದS ಇನ್ನಟ ಜೋರಾವರಿ ನಡಿಸಿ, ಪಿಸಿಪಿಸಿ ನಗೂದು, ನೋಡೋದು ಹೀಂಗ ಮಾಡಿಕೊಂತS – ಅವರೆಲ್ಲರೂ ಹೇಳೀದಾಂಗ ನಾನು ನಾಳೆ ರಾತ್ರಿ ಕೇಳದಿದ್ರ ನನ್ನ ಮಕ್ಕಳೂ ಮರಿ, ಮನಿಯಂತ ಮನಿಯಲ್ಲಾ ನಿಸ್ಸಂತಮಾಡತೇವಂತ ಅಂಜಕೀ ಹಾಕಿ ಹೋಗ್ಯಾರು. ಇದಕೇನ ಮಾಡಲಿ? ನಾನS ಜೀಂವಾ ಕೊಟ್ರ, ಬೇಕಾದೀತು; ನನ್ನ ಮಾನಾ ಎಲ್ಲಾಕ್ಕೂ ಹೆಚ್ಚಿಂದು. ಮುಂದ ನೀವೇನೋ, ನಿಮ್ಮ ಹಡೆದವರೇನೋ ನಿಮ್ಮ ಮಕ್ಕಳೇನೋ.." ಮಾತು ಸಾಗದಾಗಿ ಬಿಕ್ಕಿ ಬಿಕ್ಕಿ ಅಳಹತ್ತಿದಳು. ದುಃಖ ಮೇರೆಮೀರಿ ಕಣ್ಣುಕತ್ತಲಗೂಡಿ ಬಿದ್ದುಬಿಟ್ಟಳು.

"ಏನು?ನಾಳೆ ಒಂದ ರಾತ್ರಿಯೊಳಗೆ ಹದಿನಾಕು ಜನಾ ರಾಕ್ಷಸಗೋಳ ಹೇಳಿದಾಂಗ ಕೇಳಬೇಕS ?ಯಾರು ? ಲಕ್ಷ್ಮೆ? ನನ್ನ ಹೇಣತೆ ? ಈಕಿ ನಾಳೆ ರಾತ್ರಿ ಹದಿನಾಕು ಜನರ ಸ್ವಾದೀನಾ ?....ಆಂ...."

ರಾಮಜಿಯು ದಂಗುಬಡಿದುಹೋದನು. ಮುಖದ ಮೇಲೆ ಪ್ರೇತಕಳೆಯು ಮೂಡಿತು. ಹೆಂಡತಿಯ ಬಾಯಿಂದ ಕೇಳಿದ ಒಂದೇ ವಾಕ್ಯವು ಅವನ ಕಿವಿಯಲ್ಲಿ ಕಾದ ಕಬ್ಬಿಣವನ್ನು ಸುರುವಿದಂತಾಯಿತು. ರೊಚ್ಚು ಹೆಚ್ಚಾಯಿತು. ತಳಮಳವು ತಾಳದಾಯಿತು. ಕೂತಹಾಗೆಯೆ ಹಾಸಿಗೆಯ ಮೇಲೆ ಕುಸಿಬಿದ್ದನು.

★★★★

ದಂಡಿನ ರಾಜ್ಯದ ದಿನಗಳವು ! ಶೋಕಾಪುರದಲ್ಲಿ ದಂಡಿನ ಕಾನೂನು ತಾಂಡವವಾಡುತ್ತಿತ್ತು. ಊರವರು ಹೊರಕ್ಕೆ ಹೋಗುವಂತಿಲ್ಲ, ಹೊರಗಿನವರು ಊರೊಳಗೆ ಬರುವಂತಿಲ್ಲ. ಯಾರೂ "ಗಾಂಧೀ ಟೊಪ್ಪಿಗೆಗಳನ್ನು ಹಾಕುವಂತಿಲ್ಲ, ಯಾವ ಬಗೆಯ 'ಚಳುವಳಿ'ಯನ್ನೂ ಮಾಡುವಂತಿಲ್ಲ, ರಾತ್ರಿಯಲ್ಲಿ ಒಂಬತ್ತರ ಮೇಲೆ, ಯಾವ ಕಾರಣದಿಂದಲೇ ಆಗಲಿ, ಯಾರೂ ಬೀದಿಯಲ್ಲಿ ಅಡ್ಡಾಡುವಂತಿಲ್ಲ ; ಯಾರ ಮನೆಯಲ್ಲಿ ಸತ್ತರೂ ಕೂಡ ಮರುದಿನ ಬೆಳಗಾಗುವರೆಗೆ ಹೆಣವನ್ನು ಹೊರಕ್ಕೆ ಹಾಕುವಂತಿಲ್ಲ. 'ಗೋರಾ ಸೋಜಿರರು' ಹೆಗಲಮೇಲೆ ತುಂಬಿದ ತುಬಾಕಿಗಳನ್ನು ಚೆಲ್ಲಿಕೊಂಡು, ಸೊಂಟಕ್ಕೆ ಪಿಸ್ತೂಲಿಗಳನ್ನು ನೇತುಬಿಟ್ಟುಕೊಂಡು ಊರನ್ನೆಲ್ಲಾ ಸುತ್ತಾಡುವರು ! ಚಹಾ-ಚುಟ್ಟಾ, ಸೋಡಾ-ಪಾನಪಟ್ಟಿ ಅಂಗಡಿಯವರು ಮೊದಲ್ಗೊಂಡು ಸ್ಟೇಶನರೀ-ಜವಳಿ-ಅಂಗಡಿಯವರೆಗೂ ಇವರ ಕೈ ಹಿಡಿಯುವವರು ಯಾರೂ ಇಲ್ಲ. ಎಲ್ಲಿ ಯಾವಾಗ 'ಠುಬ್'ಎನ್ನಿಸುವರೋ ಎಂಬ ಭೀತಿ. ಇವರೆಲ್ಲರೂ ಚಕ್ಕಂದದಿಂದ ವ್ಯಾಪಾರ ಮಾಡಿದಾಗ ರೊಕ್ಕ ಕೊಟ್ಟರೂ ಸರಿಯೆ, ಇಲ್ಲವಾದರು ಸರಿಯೆ! ಕೊಟ್ಟರೆ ಕೊಟ್ಟೇ ಕೊಡುವರು, ಬಿಟ್ಟರೆ ಬಿಡುವರು ! ಅವರ ಮನೋಲಹರಿಯನ್ನು ಯಾರು ಬಲ್ಲರು? ಅವರ ಅಪಕಾರಕ್ಕೂ ಮಿತಿಯಿಲ್ಲ, ಉಪಕಾರಕ್ಕೂ ಮಿತಿಯಿಲ್ಲ. ಒಂದೊಂದು ಸಲ ಹಣ್ಣಿನಂಗಡಿ ಸಾಲಿನ ಲೂಟಿಯೋ ಲೂಟಿ. ಪಿಟ್ಟೆನ್ನುವ ಧೈರ್ಯ ಯಾರಿಗೂ ಇಲ್ಲ. ಒಮ್ಮೊಮ್ಮೆ ರೊಕ್ಕ ಬಂತು....ಲೆಕ್ಕವಿಲ್ಲದಷ್ಟು ಬಂತು ! ಹೋಯಿತು ಹೋಗಿಯೇ ಬಿಟ್ಟಿತು ! ಒಂದೊಂದು ಸಲ ಚಂದ ಚಂದ ಮಕ್ಕಳನ್ನು ಎತ್ತಿಕೊಂಡು ಹೋಗಿಬಿಡುತ್ತಿದ್ದರು. ತಾಯಿ ತಂದೆಗಳು ಹೌಹಾರಿ ಹೋಗಿರಬೇಕು. ಅಷ್ಟರಲ್ಲಿ ಸೂಟು-ಬೂಟು-ಹ್ಯಾಟುಗಳಿಂದ ಸಿಂಗಾರಾಗಿ ಕೈಯಲ್ಲಿ ಕರ್ಪೂರದ

ಗೊಂಬೆಗಳನ್ನೂ ಚಾಕೋಲೇಟಿನ ಪೊಟ್ಟಣಗಳನ್ನೂ ಹಿಡಿದುಕೊಂಡು ಕುಲುಕುಲು ಕುಣಿದಾಡುತ್ತ ಬರುವವು ಅವರ ಪ್ರೀತಿಯ ಪುತ್ತಳಿಗಳು ! ಇನ್ನೇನು....ಊರಲ್ಲಿಯ 'ಒಂದಾಣೆ ನಾಲ್ಕಾಣೆ ಮಾಲೆಗಳಿಗೆ-ಅಗ್ಗದ ದೇವದಾಸಿಯರಿಗೆ ಮಾತ್ರ ಒಳ್ಳೆ ತೇಜಿ ಬಂದಿತ್ತು, ಹೆಚ್ಚೇನು ಹೇಳುವುದು? ಶೋಕಾಪುರವೆಂದರೆ ಬೇನೆಯ ಪಿಡುಗಿನೂರಿನಂತೆ ಭೌಂಗುಡುತ್ತಲಿದ್ದಿತು ; ಸಂದಿನ ಅಮಾವಾಸ್ಯೆಯ ರಾತ್ರಿಯ ಸ್ಮಶಾನದಂತೆ ರಣಗುಡುತ್ತಲಿದ್ದಿತು. ಶೋಕಾಪುರವೆಂದರೆ ಅಂದಿನ ಕಾಳದ ಮಟ್ಟಿಗೆ "ಶೋಕಾಪುರವೇ"!.

ಇಂತಹ ಪರಿಸ್ಥಿತಿಯಲ್ಲಿ ಅದೇ ಶೋಕಾಪುರದಲ್ಲಿ ಒಬ್ಬ ಸಾಮಾನ್ಯ ಮೋಟಾರ ಡ್ರಾಯವ್ಹರನ ಮನೆಯಲ್ಲಿ ರಾತ್ರಿಯ ಹನ್ನೆರಡೂವರೆ ಗಂಟೆಗೆ, ಮೇಲೆ ಹೇಳಿದಂತೆ ಸಂಭಾಷಣೆ ನಡೆದಿದ್ದಿತು. ರಾಮಜಿಯು ಬಹಳ ಒಳ್ಳೆಯ ಡ್ರಾಯವ್ಹರನು. ಇಡಿಯ ಊರ ಜನರಿಗೆ ಆತನೂ ಆತನ ಮನೆಯ ಜನರೂ ಬೇಕಾದವರಿದ್ದರು. ಮನೆಯಲ್ಲಿ ಮುಪ್ಪಿನ ತಂದೆತಾಯಿಗಳು, ಚಿಕ್ಕ ಚಿಕ್ಕ ನಾಲ್ಕೈದು ಮಕ್ಕಳು, ಹೆಸರಿಗೆ ತಕ್ಕಂತೆ ಚೆಲುವೆಯಾದ ಆತನ ಅಚ್ಚುಮೆಚ್ಚಿನ ಹೆಂಡತಿ ಲಕ್ಷ್ಮಿಯು. ಮನೆಯು ತೀರಾ ಸಣ್ಣದು. ಅವರ ಅರಿವೆ-ಅಚಂಡಿಗಳೂ ಬಡವರಿಗೊಪ್ಪುವ ತರಹವೇ ಇದ್ದು ಜಳಜಳವಾಗಿದ್ದವು. ಆದರೆ ಲಕ್ಷ್ಮಿಯ ಮೈಮೇಲಿರುವ ಹಳೆಯ ಪದ್ಧತಿಯ ಬಂಗಾರದ ವಸ್ತುವಡವೆಗಳನ್ನು ನೋಡಿದರೆ ಅವಳಾರೋ ಸಿರಿವಂತರ ಮನೆಯ ಸೊಸೆಯಿರಬೇಕೆನಿಸುವ ಹಾಗಿತ್ತು, ಆ ಊರ ಜನರೆಲ್ಲ "ರಾಮಜೀ ಮನೀ ಒಳಗ ಇಕ್ಕೇರಿ ವರ ತುಂಬಿದ ನಾಲ್ಕು ಮಡಿಕೇನೋ ಅವ ಅಂತ. ಈಗ ನಾಲ್ಕು ತಲೀಯಿಂದ ಆವರಲ್ಲೆ ದುಡ್ಡು ಹತ್ತೇದ" ಎಂದು ಗುಣು ಗುಟ್ಟುತ್ತಿದ್ದರಂತೆ. ರಾಮಜಿಗೆ ಯಾರಾದರು ನಗೆಯಾಡಿದರೆ "ಸುಳ್ಳು ಬಿಡ್ರ್ಯೋ, ಒಂದಕ್ಕ ನಾಕು ಹುಟ್ಟಿಸಿ ಮಾತಾಡೋವರನ್ನ ನಂಬ ಬ್ಯಾಡ್ರಿ" ಎನ್ನುವನು. ಅದಕ್ಕೆ ಅವರಲ್ಲೊಬ್ಬ ಗಟ್ಟಿಗ ಗೆಳೆಯನು "ಒಂದರ ಇರಬೇಕಂತ ಒಪ್ಪಿಯಾ !" ಎನ್ನುವನು. ಆಗ ರಾಮಜಿಯು "ಇರಲಿರಲಿ ಬಿಡು, ಇಕ್ಕಾ ಚುಟ್ಟಾ ಸೇದು" ಎಂದು ಆ ಮಾತನ್ನೇ ಮರೆಮಾತಿಗೆ ಹಾಕಿಬಿಡುತ್ತಿದ್ದನು. ಅದು ಹೇಗಿದ್ದರೂ ಕುಳಿತು ತಿನ್ನುವುದು ಜನರೂಢಿಗೆ ತಕ್ಕುದಲ್ಲವೆಂದು ರಾಮಜಿಯು ಮೋಟಾರು ಸರ್ವ್ಹೀಸಿನಿಂದ ಉದರನಿರ್ವಾಹ ನಡೆಸಿದ್ದನು. "ಡ್ರಾಯವ್ಹರ"ನ ಪಟ್ಟವನ್ನೇರಿದ ಮೇಲೆ ರಾಮಜಿಯು ಮಿತಿಮೀರಿ ಕುಡಿಯಲಿಕ್ಕೆ ಕಲಿತಿದ್ದನು. 'ಸಮಾನ ಶೀಲವ್ಯಸನೇಷಯ ಸಖ್ಯಂ' ಎಂದು ಹೇಳುತ್ತಾರೆ. ಇದರಲ್ಲಿಯ 'ಶೀಲ' ಎಂಬುದನ್ನು ಹಾರಿಸಿಬಿಡಬೇಕು. ಒಂದೇ ವ್ಯಸನವಿದ್ದಲ್ಲಿಯೆ ನಿಜವಾದ ಗೆಳೆತನವಿರುತ್ತದೆ. ಅಂತೂ ಬೇರೆಯವರಿಗೆ ಹಸಿದ ಹುಲಿಗಳಂತೆ ತೋರುವ 'ಸೋಜಿರರು' ಇವನಿಗೆ ಸಾದು ಆಕಳಿನಂತಾದರು. ಇವನ ಉಲ್ಲಾಸದ ವೃತ್ತಿಯು ಈ ಗೆಳೆತನಕ್ಕೆ ಪುಟ ಕೊಟ್ಟಿತು. ಎಲ್ಲಿ ಬೇಕಲ್ಲಿಗೆ, ರಾತ್ರಿ-ಅಪರಾತ್ರಿಯೆನ್ನದೆ (ಇವನಿಗೆಲ್ಲಿಯ ಕರ್ಫ್ಯೂ ಆರ್ಡರ !) ತನ್ನ ಲಾರಿಯಲ್ಲಿ ತಿರುಗಾಡಿಸಬೇಕು ; ವನಭೋಜನಕ್ಕೊಯ್ಯಬೇಕು ; ತನ್ನ ಹೆಸರಿನ ಮೇಲೆ ಉದ್ರೀ ಮಾಡಿ ಚಹಾ-ಫಲಾಹಾರ ಇ.ಇ.ಇ. ಮನದಣಿಯುವಂತೆ ಕೊಡಿಸಬೇಕು-ಹೀಗೆ ಕ್ರಮವಿಟ್ಟುಕೊಂಡಿದ್ದನು ರಾಮಜಿ. ಬರುಬರುತ್ತ ಸಲಿಗೆ ಹೆಚ್ಚಿತು. ಗೆಳೆಯರ ಮನೆಗೆ ಬರ-ಹೋಗಹತ್ತಿದರು. ಅವನಿಲ್ಲದಾಗಲೂ ಒಮ್ಮೊಮ್ಮೆ ಬರುತ್ತಿದ್ದರು. ಲಕ್ಷ್ಮೀಬಾಯಿಯ ಕಡೆಯಿಂದ ಚಹಮಾಡಿಸಿ ಕುಡಿಯುತ್ತಿದ್ದರು. "ಚಾ ಕೊಡಕೇನ ಅಡ್ಡಿ ?" ಎಂದು ರಾಮಜಿಯೂ ಅಂದಿದ್ದನು. ನೆರೆಹೊರೆಯವರು-ಮುಂಚಿನ ಗೆಳೆಯರು, ""ರಾಮಜಿ, ಹೊರಗ ನೀ ಬೇಕಾದ್ದು ಮಾಡು, ಮನ್ಯಾಗ ಆ ಮೂಳಗೋಳಿಗೆ ಸಲಗೀ ಕೊಡಬ್ಯಾಡ, ಸಲಗೀ ನಾಯಿ ತೆಲಿಗೇರ್‍ಯವು" ಎಂದು ಬಜಾಯಿಸಿದ್ದರು. ಸರಲ ಮನಸ್ಸಿನ ರಾಮಜಿ "ಸಾಹೇಬರ ಸ್ವಭಾವಾನ ಹಾಂಗೆ. ಎಲ್ಲಾರ ಜೋಡೀಲೀನು ಸಲಿಗೀಲಿ ಇರೋದು ಅವರ ನಡತೀನ ಐತಿ" ಉತ್ತರ ಕೊಡುತ್ತಿದ್ದನು. "ಇಷ್ಟೂ ಮೀರಿ ಏನಂತೀರಿ ! ದಂಡಿನ ರಾಜ್ಯ ಮುಗಿಯೋತನಕ ಭಾಳಾದ್ರ ಇಡಿದೊಂದು ಮಡಕೀ ಖಲಾಸಾದೀತ-ಇಷ್ಟ ಽ ಹೌದಲ್ಲೋ ! ನಮ್ಮೆಲ್ಲರ ಜೀವೊಂದ ಉಳಿದ್ರ ಸಾಕು–ನಮ್ಮೆಲ್ಲರ ಮ್ಯಾಗಿಂದ ನಿವಾಳಿಸಿ ಛಲ್ತೀನಿ ! ಎಂದು ಸಮಾಧಾನ ಹೇಳಿ ನಕ್ಕುಬಿಡುತ್ತಿದ್ದನು. ಅದರ ಪರಿಣಾಮ ಬರಿಯ ಹೊನ್ನಿನ ಮೇಲಾಗದೆ, ಮನೆಯ ಮಂಗಲಲಕ್ಷ್ಮಿಯ ಮರ್ಯಾದೆಯ ಮೇಲೂ ಆಗುವುದೆಂದು ಪಾಪ, ರಾಮಜಿಯು ಏನು ಬಲ್ಲನು ?

ದಿಗಿಲುಗೊಂಡು ಐದು ನಿಮಿಷ ಬಿದ್ದುಕೊಂಡವನು ಚೇತರಿಸಿಕೊಂಡು, ಮೆಲ್ಲನೆದ್ದು ಕುಳಿತು,"ಹದಿನಾಕು ಹೆಡೀ ಹಾಂವಿಗೆ ಹಾಲೆರೆದಾಂಗಾತಲ್ಲೋ ಎಪ್ಪಾ, ದೇವ್ರ!" ಎಂದು ಎರಡೂ ಕೈಗಳಿಂದ ತಲೆಯನ್ನು ಗಟ್ಟಿಯಾಗಿ ಹಿಡಿದುಕೊಂಡು ಯೋಚನೆಯಲ್ಲಿ ಮುಳುಗಿಬಿಟ್ಟನು. ಹಾಗೆಯೇ ಎದುರಿಗೆ

ಬಿದ್ದ ಲಕ್ಷ್ಮಿಯ ಕಡೆಗೆ ಆತನ ಲಕ್ಷ್ಯವು ಹೋಯಿತು. ಕ್ಷಣಾರ್ಧದಲ್ಲಿ ಅವನ ಮುಖದ ಮೇಲೆ ನಿಶ್ಚಯದ ಕಳೆ ಮೂಡಿತು. ಅವಳ ಬಳಿಗೆ ಬಂದು, "ಲಕ್ಷ್ಮೀ, ಏಳು ನಮ್ಮಂಥಾ ಬಡವರ ಮ್ಯಾಗ ಹಿಂತಾ ಪರಸಂಗ ಹೆಚ್ಚಗೀ ಬರೂವ! ನಾ ಎಲ್ಲಾ ಇದರ ಇಚ್ಯಾರ ಮಾಡೇನಿ. ನಿನ್ನ ಕೂದಲೆಳೀಗೆ ಧಕ್ಕಿ ಬರದ್ಹಾಂಗ ನಾ ನೋಡಕೋತೀನಿ. ಇದರ ಚಿಂತೀ ಬಿಡು"ಎಂದು ಅವಳನ್ನ ಸಂತೈಸಿದನು. ಆಗ ಲಕ್ಷ್ಮಿಯು ಕಣ್ಣೀರು ಸುರಿಸುತ್ತಾ, "ನಿಮ್ಮಿಚರ ಏನು, ಯಾರಿಗೆ ಗೊತ್ತು? ನನಗ ಮುತ್ತೈದಿ ಮರಣಾ....ನಾವಿಬ್ಬರೂ ಜಲುಮ ಜಲುಮಕ್ಕೂ ಕೂಡಿರಬೇಕು...."

"ಹಾಂ, ಮುಂದಿನ ಜಲಿಮಕ್ಕೂ ಕೂಡಿರೋದು, ಹೌದಲ್ಲೋ? ಹಾಂಗಾರ ಈಗ ಮೊದಲ ನಾ ಸತ್ತುಗಂಡಾಗಿ, ನಿನ್ನಕಿಂತಾ ಮುಂಚೆ ಹುಟ್ಟಿ ಬರಾಕಬೇಕೋ ಬ್ಯಾಡೋ? ಅವರ ಪಾರಪತ್ಯಾ ಮಾಡ್ತೇನಿ-ಇಷ್ಟ ಖರೇ. ಮಾಡಿ ತಿರಗಿ ಬರಾಕಿಲ್ಲರ‍ಽ ಯಾತರ ಮ್ಯಾಲಿಂದ? ಮಕ್ಕಳ್ನ, ನನ್ನ ತಾಯಿ ತಂದಿ-ಅಲ್ಲಾ ನಿನ್ನ ತಾಯಿತಂದೀನ್ನ ಜ್ವಾಕಿ ಮಾಡಿಕೊಂಡಿರು, ನಾ ಸ್ವರ್ಗದಾಗಿಂದ ನಿನ್ನ ಧೀರೇ ನೋಡಿ ಸುಖಪಡತೇನಿ. ಇನ್ನೇನು ಸಾಯತೇನಂತರ ಯಾತರ ಮ್ಯಾಲಿಂದ? ತಿರುಗಿ ಬರಾಕಿಲ್ಲಾ ಅವರ್ನೆಲ್ಲಾ ಗತಿಗಾಣಿಸಿ, ಅಂತರ ಯಾತರ ಮ್ಯಾಲಿಂದ?"

ಲಕ್ಷ್ಮಿಯು ಭೋರೆಂದು ಅತ್ತಳು. ರಾಮಜಿಯು ಅವಳನ್ನು ತಬ್ಬಿಕೊಂಡು ಸಂತೈಸಲೆತ್ನಿಸಿದನು. ಮಕ್ಕಳನ್ನು ಮತ್ತೆ ಮತ್ತೆ ಮುದ್ದಾಡಿದನು. ಪತಿ ಪತ್ನಿಯರಿಗೆ ನಿದ್ರೆಯೇ ಇಲ್ಲ, ಹಾಂಹಾಂ ಎನ್ನುವಷ್ಟರಲ್ಲಿಯೇ ಬೆಳಗಾಯಿತು.

ರಾಮಜಿಯು ಎದ್ದವನೇ ಮೊದಲು ಮೋಟಾರು ತೆಗೆದುಕೊಂಡು ನೇರವಾಗಿ ದಂಡಿನವರಿದ್ದಲ್ಲಿಗೆ ಬಂದು ತನ್ನೊಡನೆ ಸ್ನೇಹ ಬೆಳೆಯಿಸಿದ ಆ ಹದಿನಾಲ್ಕು ಜನ ಸಾಹೇಬರನ್ನ ಕಂಡನು. ಅವರನ್ನೊಂದು ಕಡೆ ಕರೆದು ಅವರಪೇಕ್ಷಿಸಿದ ಮೇರೆಗೆ ಅಂದಿನ ರಾತ್ರಿಯ ಹನ್ನೆರಡು ಗಂಟೆಗೆ ಅವರ ಬಯಕೆಯನ್ನು ಪೂರೈಸುವುದಾಗಿ ಹೇಳಿದನು. ಅದಕ್ಕೆ ಪ್ರತಿಫಲವಾಗಿ ಹದಿನೈದು ನೂರು ರೂಪಾಯಿಗಳನ್ನು ಮೋಟಾರಿಗಾಗಿ ಮಾಡಿದ ಸಾಲ ತೀರಿಸಲಿಕ್ಕೆ ಕೊಡಬೇಕೆಂದು ತೀರ ಬಡವನಂತೆ ಬೇಡಿಕೊಂಡನು. ಅವರು ಕೊಟ್ಟರು-ಅವರಿಗೇನು ಕೊರತೆ, ಕಲ್ಪವಲ್ಲರಿಯು ಅವರ ಸೊಂಟಕ್ಕೇ ಸುತ್ತಿರುವಾಗ? ಹಣವನ್ನು ತೆಗೆದುಕೊಂಡು ಬರುವಾಗ ದಾರಿಯಲ್ಲಿದ್ದ ಗಡಂಗವನ್ನು ಹೊಕ್ಕು ಮನದಣಿಯೆ ಮದ್ಯಪಾನ ಮಾಡಿದನು. ಮನೆಗೆ ಬಂದು ತಾಯಿಯ ಕೈಯಲ್ಲಿ 'ಮೋಟಾರಿಗಾಗಿ ಮಾಡಿದ ಸಾಲ'ವೆಂದು ಕೊಟ್ಟನು; ಎಂದರೆ ಅವನ ತಾಯಿಯೇ ಅವನಿಗೆ ಸಾಲಕೊಟ್ಟು ಸಾಹುಕಾರಳಾಗಿದ್ದಳು. ಇನ್ನೇನು ಮೋಟಾರು ಇಂದಿಗೆ ಸ್ವತಂತ್ರವಾಯಿತು. ಅದರ ಮೇಲೆ ಯಾರ ಹಕ್ಕೂ ಹಂಗೂ ಇಲ್ಲವೆಂದು' ಕೊಂಡನು. ತಾಯಿಗೆ ಬಲು ಸೋಜಿಗವಾಯಿತು. ಆದರೆ ಅವನ ಮುಖ ನೋಡಿ ಸುಮ್ಮನಾದಳು. ಎಲ್ಲರೂ ಕೂಡಿ ಊಟ ಮಾಡಿದರು.

ಅಂದು ರಾಮಜಿಯ ಮನಸ್ಸು ಬಲು ವಿಚಿತ್ರವಾಗಿದ್ದಿತು. ಒಮ್ಮೆ ತೀರ ದೀನನಾಗಿ ಕಣ್ತುಂಬ ನೀರು ತಂದು, ಹೆಂಡತಿ ಮಕ್ಕಳನ್ನೂ ತಾಯಿತಂದೆಗಳನ್ನೂ ನಿಟ್ಟಿಸಿ ನೋಡುವನು; ಒಮ್ಮೆ ಮಕ್ಕಳೊಡನೆ ಉಲ್ಲಾಸದಿಂದ ಆಡುವನು - ಆಗ ತನ್ನಷ್ಟು ಅದೃಷ್ಟಶಾಲಿಯು ಜಗತ್ತಿನಲ್ಲಿಯೇ ಅದಾವನೂ ಇಲ್ಲವೆಂಬಂತೆ ತೋರುವನು. ಒಮ್ಮೆ ಒಳ್ಳೆಯ ರಭಸದಿಂದ ಹಲ್ಲುಕಡಿಯುತ್ತ, ತನ್ನಷ್ಟಕ್ಕೆ ತಾನೆ ವಟಗುಟ್ಟುವನು. ಇವನ ನಡವಳಿಕೆಯ ಅರ್ಥವು ಆದಾರಿಗೂ ಆಗಲೇ ಇಲ್ಲ, ಏನು ಮಾಡಬೇಕೆಂದು ತೋಚದೆ ಮನೆಯ ಜನರೆಲ್ಲೂ ಮೌನಧಾರಿಗಳಾಗಿದ್ದರು. ಇವನ ಆಗ್ರಹಕ್ಕಾಗಿ ಬೂದಿ ಮುಚ್ಚಿದ ಕೆಂಡದಂತೆ ದುಃಖವನ್ನಡಗಿಸಿಕೊಂಡು, ಒಳ್ಳೆಯ ಶೃಂಗಾರವಾಗಿ, ಸಡಗರದಿಂದ ಲಕ್ಷ್ಮಿಯು ಎರವಿನ ನಗೆಯಿಂದಡಗೂಡಿ ಓಡಾಡುತ್ತಿದ್ದಳು; ರಾಮಜಿಯ ಎದುರಿಗೆ ಪಿಟ್ಟೆಂದು ಮಾತನಾಡುವ ಧೈರ್ಯ ಒಬ್ಬರಿಗೂ ಇಲ್ಲ.

ಸಾಯಂಕಾಲದವರೆಗೆ ಇದೇ ಕ್ರಮವು ನಡೆಯಿತು. ರಾತ್ರಿಯ ಎಂಟರ ಸುಮಾರಿಗೆ ಬಗೆಬಗೆಯ ತಿನಿಸು-ಉಣಿಸುಗಳು ಇವನ ಅಪ್ಪಣೆಯ ಮೇರೆಗೆ ನಾಲ್ಕಾರು ಹೋಟಲುಗಳಿಂದ ಬಂದವು. ಹಾರ ತುರಾಯಿ, ಅತ್ತರು, ಗುಲಾಬ, ಹೊಸ ಹೊಸ ಕಪ್ಪು ಸಾಸರುಗಳನ್ನೂ ಕೊಂಡದ್ದಾಯಿತು. ಅವುಗಳ ಕೆಲಭಾಗವನ್ನಾಗಲೇ ಹೆಂಡತಿ-ಮಕ್ಕಳೊಂದಿಗೆ, ತಾಯಿತಂದೆಗಳೊಡನೆ ತಿಂದುಂಡು ಸುಖಪಟ್ಟನು; ಬಳಿಕ ಮೋಟಾರು ತೆಗೆದುಕೊಂಡು ಹೋಗಿ ಆ ಹದಿನಾಲ್ಕು ಜನ ಮಿತ್ರರಿಗೆ, ತಾನು ಸರಿಯಾಗಿ ಮಧ್ಯ ರಾತ್ರಿಯ ಒಂದು ಗಂಟೆಗೆ ಬಂದು ಅವರನ್ನೆಲ್ಲ ತನ್ನ ಮನೆಗೆ ಕರೆದೊಯ್ಯುವುದಾಗಿಯೂ ಇಂತಹ ಮೆಟ್ಟಿನಲ್ಲಿ ತನಗಾಗಿ

ಕಾದಿರಬೇಕೆಂತಲೂ ಹೇಳಿ, ತಿರುಗಿದನು. ಬಾಗಿಲ ಹಾಕಿ ಮೂರು ಗಂಟೆ ಎಂದರೆ ಹನ್ನೆರಡವರೆಗೆ ಪರಿವಾರದೊಂದಿಗೆ ನಿದ್ರೆ ಹೋದನು. ನಿದ್ರೆಯೇತರದು ? ಹನ್ನೆರಡಕ್ಕೆ ಎದ್ದನು. ಮನೆಮಂದಿಯೊಂದಿಗೆ ಹಿತೋಕ್ತಿಯ, ಅಂತಃಕರಣದ, ಜೀವಜೀವಾಳದ, ಸುಖದುಃಖದ ಹರಟೆ ಮನವಾರೆ ಹೊಡೆದನು. ಕೊನೆಯ ಬಾರಿ ಹೆಂಡತಿಯ ಮಕ್ಕಳನ್ನು ಗಾಢವಾಗಿ ಆಲಂಗಿಸಿದನು. ಹದಿನಾಲ್ಕು ಹೆಡೆಗಳ ಸರ್ಪದ ಪಾರುಪತ್ಯ ಮಾಡಲು ಮೋಟರಿನೊಂದಿಗೆ ಹೊರಟನು.

ಗೊತ್ತುಮಾಡಿದ ಮಟ್ಟಿಗೆ ಬಂದು ಹದಿನಾಲ್ಕು ಜನ ಮಿತ್ರರನ್ನು ಕರೆದುಕೊಂಡು ಕಿಸನಸಿಂಗನ ಗಡಂಗಕ್ಕೆ ಬಂದು, ಅವರೆಲ್ಲರಿಗೂ ಮನದಣಿಯ ಮದ್ಯಪಾನ ಮಾಡಿಸಿದನು, ತಾನೂ ತೆಗೆದುಕೊಂಡನು. ''ಕಿಸನಸಿಂಗ, ಮಿತ್ರಾ'' ಎಂದು ಅವನನ್ನಪ್ಪಿಕೊಂಡನು. ಹೀಗೇಕೆ ಮಾಡುವನೆಂದು ಅವನಿಗೆ ಸೋಜಿಗವಾಯಿತು ; ಕುಡಿದದಕ್ಕೆ ಮಾಡುತ್ತಿರಬೇಕೆನ್ನಿಸಿತು.

ಮನೆಗೆ ಬಂದು ಬಾಗಿಲೆದುರಿಗೆ ಮೋಟಾರು ನಿಲ್ಲಿಸಿದನು; ಒಳಗೆ ಹೊಕ್ಕು, ಪತ್ನಿಯನ್ನು ಆ ಗೋರಾಸಾಹೇಬರಿಗೆ ಕಾಣುವಂತೆ, ನಾಲ್ಕಾರು ಬಾರಿ ಒಳಗೇ ಬೆಳಕಿನಲ್ಲಿ ಓಡಾಡಿದನು. ಅಲ್ಲಾವುದ್ದೀನನ ಕಣ್ಣಿಗೆ ಪದ್ಮಿನಿಯು ಕಂಡಂತಾಯಿತು. ಹದಿನಾಲ್ಕು ಹೆಡೆಗಳೂ ಮಂತ್ರಮುಗ್ಧ-ವಾದವು. ಅವರೆಲ್ಲರೂ ಇಳಿಯತೊಡಗಿದ ಕೂಡಲೆ, ''ಹಾಂ, ಚಹಾಕ್ಕೆ ಹಾಲು ಇಲ್ಲವಂತೆ, ನಡೆಯಿರಿ, ಗೌಳಿಗರ ಧನಾಜಿಯಲ್ಲಿ ಹೋಗಿ ಒಂದು ಕೊಡ ಹಾಲು ತರುವಾ'' ಎಂದು ಸರ್ರನೆ ಮೋಟಾರು ಬಿಟ್ಟನು. ಒಂದು ಬಡಿಯಲಿಕ್ಕೆ ಹದಿನೈದು ನಿಮಿಷವಿದ್ದಿತು. ಎಲ್ಲರೂ ಮತ್ತೇರಿದ ಮಂಗಗಳಾಗಿದ್ದರು. ಅಡ್ಡದಾರಿಯಿಂದ ಗೌಳೀಗರ ಬೀದಿಗೆ ಹೊಡೆದು, ಧನಜಿಯನ್ನೆಬ್ಬಿಸಿ, ಹಾಲುಕೊಂಡುಕೊಂಡು ಅವನ ಕೈಯಲ್ಲಿ ಹತ್ತು ರೂಪಾಯಿಯ ನೋಟನ್ನಿಟ್ಟನು. ಇಷ್ಟೇಕೆ ಎಂದು ಅವನು ಬೆರಗಾದಾಗ 'ನಾಳೆ ನೋಡೋಣ' ಎಂದವನೇ 'ಸಾಹೇಬರೇ ಮನೆಗೆ ಹೋಗೋಣವೇ ?' ಎಂದನು. ''ಓಹೋ'' ಎಂದುತ್ತರ ಬಂದಿತು. ಎಲ್ಲರೂ ಜೋಲೀ ಹೊಡೆಯುತ್ತಿರುವಾಗಲೇ ವಾಯುವೇಗದಿಂದ ಮೋಟಾರು ಬಿಟ್ಟನು. ಅದಲ್ಲಿಗೆ ಹೊರಟಿದ್ದಿತೆಂಬುದು ರಾಮಜಿಯ ಹೊರತು ಯಾರಿಗೂ ಗೊತ್ತಿರಲಿಲ್ಲ, ಸ್ವರ್ಗಸುಖದ ದಾರಿಯನ್ನೇ ಎಲ್ಲರೂ ಕಾದಿದ್ದರು.

ಹತ್ತು ನಿಮಿಷಗಳವರೆಗೆ ಮೋಟಾರು ಎಲ್ಲಿಯವರೆಗೋ ಸಾಗಿತ್ತು, ಸಾಗಿತು....ಸಾಗಿತು....ಒಂದು ಆಳವಾದ ಕಂದಕದ ಇಳುಕಲಿನ ಹಾದೀ ಹಿಡಿದು, ಕಾಳರಾತ್ರಿಯ ಕಗ್ಗತ್ತಲೆಯಲ್ಲಿ, ಒಳಒಳಗೆ ಅದೆಲ್ಲಿಗೋ....! ಅರೆನಿಮಿಷದಲ್ಲಿ ಅದಾವುದೋ ಒಂದು ಗಿಡಕ್ಕೆ ಅಪ್ಪಳಿಸಿದುದರ ಸಪ್ಪಳ ಕೇಳಬಂದಿತು.''ಲಕ್ಷ್ಮೀ ನಿನ್ನ ಮಾನಾ ಕಾಯ್ದೆ ಧನ್ಯಾದೆ !'' ಎಂಬ ಗರ್ಜನೆಯ ನಿನಾದವು ದಶದಿಕ್ಕುಗಳಲ್ಲಿ ಪ್ರತಿಧ್ವನಿಗೊಂಡಿತು. ತೀರ ಒಳಗಿನಿಂದ, ಹಲವು ಪಿಸ್ತೂಲಿಗಳು ಹಾರಿದ ಸಪ್ಪಳವೂ ಚೀರುವ ಧ್ವನಿಗಳ ಹಾಹಾಕಾರವೂ ಕಲೆತು ದೂರದ ಗುಡುಗಿನಬ್ಬರದಂತೆ ತೇಲಿಬಂದವು.

●

ಸ್ವತಂತ್ರ್ಯ ಪೂರ್ವ ಲೇಖಕಿಯರಲ್ಲಿ ಪ್ರಮುಖರಾದವರಲ್ಲಿ ಶ್ಯಾಮಲಾದೇವಿ ಬೆಳಗಾಂವ್‌ಕರ್ ಅವರೂ ಒಬ್ಬರು. ಲೇಖಕಿಯೂ, ಸ್ತ್ರೀ ಪರ ಸಂವೇದನಗಳೊಂದಿಗೆ ಮಹಿಳಾ ಸಂಘಟನೆಯ ಜೊತೆಗೆ ನಿಕಟ ಸಂಬಂಧವನ್ನು ಇರಿಸಿಕೊಂಡಿದ್ದ ಶ್ಯಾಮಲಾದೇವಿ ಪತ್ರಕರ್ತೆಯೂ ಹೌದು. ವಿಜಯಾದಬ್ಬೆಯವರು ಸಂಪಾದಿಸಿರುವ 'ಶ್ಯಾಮಲಾ ಪರಿಚಯ' ಶ್ಯಾಮಲಾ ಅವರ ಬದುಕು ಬರಹಗಳನ್ನು ನಮಗೆ ಪರಿಚಯಿಸುತ್ತದೆ. ಈ ಕಥೆಯನ್ನು ಆ ಸಂಕಲನದಿಂದ ಆಯ್ದುಕೊಳ್ಳಲಾಗಿದೆ. ಬ್ರಿಟಿಷ್ ವಸಾಹತುಶಾಹಿ ಆಳ್ವಿಕೆಯಲ್ಲಿ ದಂಡಿನವರ ಮೋಜು, ದೌರ್ಜನ್ಯಕ್ಕೆ ಒಳಗಾದ ಸ್ಥಳೀಯರ ಒಂದು ಹೃದಯಂಗಮ ಚಿತ್ರಣ ಈ ಕಥೆಯಲ್ಲಿ ದೊರೆಯುತ್ತದೆ.

# ಮಹಿಳಾ ಸಂಘಟನೆಗಳು ಮತ್ತು ಗೃಹಿಣಿ

- ಶಾಂತಾ ನಾಗರಾಜ್

ಮೂವತ್ತೈದು ವರ್ಷಗಳ ಹಿಂದೆ ನಮ್ಮ ಪರಿಚಿತ ದಂಪತಿಗಳು ಇಂಗ್ಲೆಂಡಿನಿಂದ ಮತ್ತೆ ಬೆಂಗಳೂರಲ್ಲೇ ನೆಲೆಸಲು ಬಂದರು. ಅವರು ಹತ್ತು ವರ್ಷಗಳಿಗೂ ಹೆಚ್ಚುಕಾಲ ಇಂಗ್ಲೆಂಡಿನಲ್ಲಿದ್ದರು. ನಮ್ಮ ಮನೆಯ ಎದುರು ಮನೆಯೇ ಬಾಡಿಗೆಗೆ ಸಿಕ್ಕಿತು. ಮಕ್ಕಳ ಶಾಲೆ, ರೇಷನ್ ಶಾಪ್ ಇತ್ಯಾದಿ ವ್ಯವಸ್ಥೆಗಳೆಲ್ಲ ಆದ ಮೇಲೆ ''ಇಲ್ಲಿ ಮಹಿಳಾ ಸಮಾಜ ಎಲ್ಲಿದೆ?'' ಎಂದು ನನ್ನನ್ನು ಕೇಳಿದರು. ನಾನು ಕಕ್ಕಾಬಿಕ್ಕಿಯಾದೆ. ''ನಿಮಗೆ ಯಾಕೆ ಬೇಕು ಮಹಿಳಾ ಸಮಾಜ'' ಎಂದು ಉತ್ತರಕ್ಕೆ ಬದಲು ಪ್ರಶ್ನೆಯನ್ನೇ ಕೇಳಿದೆ. ''ಏಕೆಂದರೆ ಮೆಂಬರ್ ಆಗಲು'' ಎಂದು ಉತ್ಸುಕರಾಗಿ ಹೇಳಿದರು. ಅದು ಅರವತ್ತರ ದಶಕದ ಉತ್ತರಾರ್ಧ. ಬೆಂಗಳೂರಿನಲ್ಲಿ ಶಾರದಾ ಸ್ತ್ರೀ ಸಮಾಜ ನೂರಾರು ವರ್ಷಗಳಿಂದ ಇರುವುದು ತಿಳಿದಿತ್ತು, ಬಸವನಗುಡಿ ಮಹಿಳಾ ಸಮಾಜ, ಮಲ್ಲೇಶ್ವರಂ ಲೇಡೀಸ್ ಕ್ಲಬ್ ಹೀಗೆ ಒಂದಿಷ್ಟು ಬೆರಳೆಣಿಕೆಯ ಸಂಘಟನೆಗಳೂ ಜನರ ಮನ ತಲುಪಿತ್ತು, ಆದರೆ ಪ್ರತಿಯೊಂದು ಹೊಸ ಬಡಾವಣೆಯಲ್ಲೂ ಶಾಲೆಯಿರುವಂತೆ, ದೇವಸ್ಥಾನ ಕಟ್ಟುವಂತೆ, ಅಂಗಡಿ ಮುಂಗಟ್ಟು, ರೇಷನ್ ಶಾಪ್ ಇರುವಂತೆ ಒಂದು ಮಹಿಳಾ ಸಮಾಜವೂ ಕಡ್ಡಾಯವಾಗಿರಬೇಕು ಎನ್ನುವ ಕಲ್ಪನೆ ಅಂದಿನ ಸಮಾಜಕ್ಕೆ ಇರಲಿಲ್ಲ. ಬದಲಿಗೆ ನಾಟಕ, ಸಿನೆಮಾಗಳಲ್ಲಿ, ಪತ್ರಿಕೆಗಳ ವ್ಯಂಗ್ಯ ಚಿತ್ರಗಳಲ್ಲಿ 'ಕೆಲವು ಶ್ರೀಮಂತ ಮಹಿಳೆಯರು ಮಾಡಲು ಕೆಲಸವಿಲ್ಲದೇ ತಮ್ಮ ಸೀರೆ ಬಟ್ಟೆ ಒಡವೆ ಮತ್ತು ಹೇರ್‌ಸ್ಟೈಲ್ ಪ್ರದರ್ಶನಕ್ಕೆ ಮಹಿಳಾ ಸಮಾಜಕ್ಕೆ ಸೇರುತ್ತಾರೆ' ಎನ್ನುವ ಅರ್ಥ ಬರುವಂತೆ ಚಿತ್ರಿಸಲಾಗಿತ್ತು. ವ್ಯಂಗ್ಯ ಚಿತ್ರಗಳಲ್ಲಂತೂ ದಪ್ಪನೆಯ ಹೆಂಗಸು ತೋಳಿಲ್ಲದ ರವಿಕೆ ಧರಿಸಿ ಕೂಲಿಂಗ್ ಗ್ಲಾಸ್ ಹಾಕಿಕೊಂಡು ತಲೆಯ ಮೇಲೆ ಶಿಖರದಂತಹ ಕೇಶಾಲಂಕಾರ ಮಾಡಿಕೊಂಡು ಮನೆಯ ಅಡುಗೆ ಕೆಲಸವನ್ನು ಗಂಡನಿಗೊಪ್ಪಿಸುವ ರೀತಿಯಲ್ಲೇ ಚಿತ್ರಿತವಾಗುತ್ತಿತ್ತು. ಮಹಿಳಾ ಸಮಾಜಕ್ಕೆ ಸದಸ್ಯೆಯಾಗುವುದು ಮತ್ತು ಪುಸ್ತಕ ನೋಡಿಕೊಂಡು ಅಡುಗೆ ಮಾಡುವುದು ಇವೆರಡನ್ನೂ ಸಾಮಾನ್ಯ ಗೃಹಿಣಿಯರೂ ಗೇಲಿಮಾಡುವ ವಿಷಯವನ್ನಾಗಿ ಬಳಸುತ್ತಿದ್ದರು. ಸಂಪ್ರದಾಯಸ್ಥ ಕುಟುಂಬಗಳಿಗಂತೂ ಮಹಿಳೆಯರನ್ನು ತಮ್ಮ ಕರ್ತವ್ಯಗಳಿಂದ ವಿಮುಖರನ್ನಾಗಿಸುವ, ಹಾದಿ ತಪ್ಪಿಸುವ ವ್ಯವಸ್ಥೆಯೇ ಮಹಿಳಾ ಸಮಾಜ ಎನಿಸುತ್ತಿತ್ತು.

ಇಂದಿನ ಸಮಾಜ ಈ ಎಲ್ಲಾ ನಿರಾಧಾರ ಸಂಗತಿಗಳಿಂದ ಕಳಚಿಕೊಳ್ಳುತ್ತಿದೆ. ಪ್ರತಿ ಬಡಾವಣೆಗಳಲ್ಲೂ ಮಹಿಳಾ ಸಮಾಜಗಳು ತಲೆ ಎತ್ತುತ್ತಿವೆ. ಕೆಲವು ಸಮಾಜಗಳಂತೂ ಸ್ವಂತ ಕಟ್ಟಡಗಳನ್ನು ಹೊಂದಿ ಪ್ರಗತಿಪರ ಚಟುವಟಿಕೆಯಲ್ಲಿ ತೊಡಗಿವೆ. ಆದರೂ ಮಹಿಳಾ ಸಮಾಜ ಸುವ್ಯವಸ್ಥಿತವಾದ ಏಕಮಾದರಿಯ ಗೊತ್ತುಗುರಿಗಳನ್ನು ಹೊಂದಿಲ್ಲ. ಮಹಿಳೆಯರು ತಮ್ಮ ಬಿಡುವಿನ ವೇಳೆಯಲ್ಲಿ ಹೊಲಿಗೆ, ಕಸೂತಿ, ಹಿಂದಿ, ಇಂಗ್ಲಿಷ್ ಮತ್ತು ಅಡುಗೆ ಸಂಗೀತ ಕಲಿಯುವುದಕ್ಕಾಗಿಯೇ ಮಹಿಳಾ ಸಮಾಜವಿದೆ ಎಂದು ಭಾವಿಸಿದ್ದಾರೆ. ಜೀವನದಲ್ಲಿ ಇವೆಲ್ಲವೂ ಬೇಡದವರಿಗೆ ಮಹಿಳಾ ಸಮಾಜದ ಸದಸ್ಯತ್ವ ಅಗತ್ಯವಿಲ್ಲ ಎಂಬ ಭಾವವಿದೆ. ಇದಕ್ಕೆ ಇಂದಿನ ಮಹಿಳಾ ಸಮಾಜಗಳೂ ಕಾರಣವಾಗಿವೆ. ಅಧ್ಯಕ್ಷೆಯ ಅಥವಾ ಕಾರ್ಯದರ್ಶಿಯ ಮರ್ಜಿಯಂತೆ ಒಂದಿಷ್ಟು ಕಾರ್ಯಕ್ರಮಗಳ ಚೌಕಟ್ಟಿನಲ್ಲೇ ನಡೆಯುವ ಮಹಿಳಾ ಸಮಾಜ ಎಲ್ಲರನ್ನೂ ಆಕರ್ಷಿಸುವಲ್ಲಿ ಸೋಲುತ್ತಿದೆ.

ಪ್ರಾರಂಭದಲ್ಲಿ ಪ್ರಸ್ತಾಪಿಸಿದ ಇಂಗ್ಲೆಂಡಿನ ಸ್ನೇಹಿತರು ಅಲ್ಲಿಯ ಮಹಿಳಾ ಸಂಘಟನೆಗಳ ವ್ಯವಸ್ಥೆ ಮತ್ತು ಶಕ್ತಿಯನ್ನು ಹೇಳಿದಾಗ ಆಶ್ಚರ್ಯವಾಯಿತು. ಅಲ್ಲಿ ಪ್ರತಿಯೊಂದು ಮಹಿಳಾ ಸಮಾಜವೂ ನೊಂದಣಿ ಮಾಡಿಸಿರುತ್ತದೆ. ಹೀಗೆ ರಿಜಿಸ್ಟರ್ ಆದ ಸಮಾಜಗಳು ಎರಡು ವರ್ಷಕ್ಕೊಮ್ಮೆ ಅಧಿವೇಶನ ನಡೆಸುತ್ತವೆ. ಆದರಲ್ಲಿ ಪ್ರತಿಯೊಂದು ಸಮಾಜ ತಾನು ಈ ಎರಡು ವರ್ಷಗಳಲ್ಲಿ ಮಾಡಿದ ವಿಶೇಷ ಸಾಧನೆಯನ್ನು ವಿವರಿಸುತ್ತದೆ. ಅಲ್ಲದೆ ಈ ಅಧಿವೇಶನದಲ್ಲಿ ಸರ್ಕಾರದ ನಿಲುವುಗಳಿಂದ ಮಹಿಳೆಯರಿಗೆ ತೊಂದರೆಯಾಗುತ್ತಿದ್ದರೆ, ವ್ಯಾಪಾರಿಗಳ ಬೆಲೆಯ ಏರಿಳಿತಗಳಿಂದ ಆಗುತ್ತಿರುವ ಆರ್ಥಿಕ ಅಸಮತೋಲನ, ಇತ್ಯಾದಿ ಮುಖ್ಯವಾಹಿನಿಯ ಅನೇಕ ವಿಷಯಗಳನ್ನು ಕುರಿತು ಚರ್ಚಿಸಲಾಗುತ್ತದೆ. ಈ ಅಧಿವೇಶನಗಳು ತೆಗೆದುಕೊಳ್ಳುವ ತೀರ್ಮಾನಗಳಿಗೆ ಸರ್ಕಾರ ಮತ್ತು ಎಲ್ಲ ವ್ಯವಸ್ಥೆಗಳೂ ಬಹಳ ಬೆಲೆಯನ್ನು ಕೊಡುತ್ತವೆ. ಅಲ್ಲಿ ಮಹಿಳೆಯರ ಸಂಘಗಳ ನಿಲುವುಗಳು ಅಷ್ಟು ಸಶಕ್ತವಾಗಿವೆ. ಯಾವುದೇ ವಸ್ತುವಿನ ಬೆಲೆಯೇರಿಸಬೇಕಾದರೆ ಅದರ ತಯಾರಕರು ಹತ್ತು ಬಾರಿ ಯೋಚನೆ ಮಾಡಬೇಕಾಗುತ್ತದೆ. ಅದರಲ್ಲೂ ಆ ವಸ್ತು ಮಹಿಳೆಯ ಉಪಯೋಗದ್ದಾದರಂತೂ ಇನ್ನೂ ಹೆಚ್ಚಿನ ಎಚ್ಚರಿಕೆ

ಬೇಕಾಗುತ್ತದೆ. ಬೆಲೆಏರಿಕೆಗೆ ಸರಿಯಾದ ಕಾರಣಗಳನ್ನು ನೀಡಬೇಕಾಗುತ್ತದೆ. ಅದು ಮಹಿಳೆಯರಿಗೆ ಒಪ್ಪಿತವಾದರೆ ಸರಿ, ಇಲ್ಲದಿದ್ದರೆ ಆ ವಸ್ತುವಿನ ನೇರ ಗ್ರಾಹಕಿ ಮಹಿಳೆಯೇ ಅದನ್ನು ತಿರಸ್ಕರಿಸಿಬಿಟ್ಟರೆ ಅದನ್ನು ನಿರ್ಮಿಸಿದ ಕಂಪನಿ ಮುಳುಗಬೇಕಾಗುತ್ತದೆ.

ಅಮೆರಿಕದಲ್ಲಿ ಒಮ್ಮೆ ಸಕ್ಕರೆ ಬೆಲೆ 25 ಸೆಂಟುಗಳಷ್ಟು ಹೆಚ್ಚಾದಾಗ ಮಹಿಳೆಯರು ಪ್ರತಿಭಟಿಸಿ ಸರ್ಕಾರ ಸಕ್ಕರೆ ಬೆಲೆಯನ್ನು ಇಳಿಸಬೇಕಾಗಿ ಬಂದದ್ದನ್ನ ಗಮನಿಸಿದ್ದೇವೆ. ಸಂಘ ಶಕ್ತಿಯಲ್ಲಿ ಅಷ್ಟೊಂದು ಬಲವಿದೆ. ಈ ಸತ್ಯವನ್ನು ರಹಸ್ಯವನ್ನು ನಮ್ಮ ದೇಶದ ಮಹಿಳಾ ಸಂಘಟನೆಗಳು ಇನ್ನೂ ತಿಳಿದುಕೊಂಡಿಲ್ಲ.

ನರ್ಮದಾ ನದಿಯ ಉಳಿವಿಗಾಗಿ 'ನರ್ಮದಾ ಬಚಾವ್ ಆಂದೋಲನ'ಗಾಗಿ ಮೇಧಾ ಪಾಟ್ಕರ್ ಎಷ್ಟೋ ವರ್ಷಗಳಿಂದ ಹೋರಾಡುತ್ತಿದ್ದಾರೆ. ನರ್ಮದಾ ನದಿ ಬರೀ ಮಹಾರಾಷ್ಟ್ರ ಮತ್ತು ಮಧ್ಯ ಪ್ರದೇಶದ ನದಿ ಮಾತ್ರವಲ್ಲ ಅದು ಭಾರತದ ನದಿ. ಮುಂದಿನ ಜನಾಂಗಕ್ಕೆ ಅದನ್ನು ಉಳಿಸಿಡುವುದು ಪ್ರತಿ ಭಾರತೀಯ ಕರ್ತವ್ಯ. ಆದರೆ ಎಷ್ಟು ಮಹಿಳಾ ಸಂಘಗಳು ಮೇಧಾರವರ ಜೊತೆ ದನಿಗೂಡಿಸಿವೆ? ಹೊಸ ಕಾರ್ಖಾನೆಗಳನ್ನು ನಿರ್ಮಿಸಿ, ತುಂಬಿ ಹರಿಯುತ್ತಿರುವ ಬಹು ದೊಡ್ಡ ನದಿಯ ಜೀವಂತಿಕೆಯನ್ನೇ ನಾಶಮಾಡಲು ಹೊರಟ ಪಟ್ಟಭದ್ರ ಹಿತಾಸಕ್ತಿಗಳ ಹುನ್ನಾರ ಎಷ್ಟು ಜನಕ್ಕೆ ಅರ್ಥವಾಗಿದೆ? ರೂಪಾಕನ್ವರ್ ಸತಿಯಾದಾಗ, ಬಾಲ್ಯ ವಿವಾಹವನ್ನು ತಡೆದದ್ದಕ್ಕೆ ಭಾವ್ರೀ ದೇವಿಯ ಮೇಲೆ ಊರಿನ ಗಣ್ಯರ ಗುಂಪೇ ಅತ್ಯಾಚಾರವೆಸಗಿದಾಗ, ರಾಜಕಾರಣಿಯೊಬ್ಬ ತನ್ನ ಹೆಂಡತಿಯನ್ನು ತಂದೂರಿ ಒಲೆಯೊಳಗಿಟ್ಟು ಸುಟ್ಟೇಬಿಟ್ಟಾಗ, ಇಂಥ ಸಾವಿರ ಸಾವಿರ ಶೋಷಣೆಯ ವಿರುದ್ಧ ಯಾವ ಯಾವ ಮಹಿಳಾ ಸಂಘಟನೆಗಳು ಒಂದಾಗಿ ದನಿಯೆತ್ತಿವೆ?

ಮಹಿಳಾ ಸಂಘಟನೆಗಳೆಂದರೆ ಬರೀ ಅಡುಗೆ, ಶೃಂಗಾರದ ಕಲಿಕೆಯ ಕೇಂದ್ರಗಳಲ್ಲ ಮೊದಲು ತನ್ನ ಅಗತ್ಯ ಮತ್ತು ಖುಷಿಯನ್ನೂ ಪೂರೈಸಿಕೊಳ್ಳಲಿ ನಂತರ ತನ್ನ ದೇಶಕ್ಕೆ ಕಿಂಚಿತ್ತಾದರೂ ಪ್ರಗತಿ ತರುವ ಕಾರ್ಯಗಳಿಗೆ ನೆರವಾಗಲಿ. 'ಒಗ್ಗಟ್ಟಿನಲ್ಲಿ ಬಲವಿದೆ' ಎನ್ನುವ ಸತ್ಯವನ್ನು ಬರಿ ಭಾರತಕ್ಕಷ್ಟೇ ಅಲ್ಲ; ಇಡೀ ವಿಶ್ವಕ್ಕೇ ಗಾಂಧೀಜಿಯವರು ತೋರಿಸಿ ಕೊಟ್ಟಿದ್ದಾರೆ. ಅಂಥ ಒಗ್ಗಟ್ಟಿನ ಶಕ್ತಿ ಅರಿಯುವುದು ಇಂದಿನ ಮಹಿಳಾ ಸಂಘಟನೆಗಳಿಗೆ ತೀರಾ ಅಗತ್ಯವಾಗಿದೆ. ವಿದ್ಯಾವಂತೆಯಾದ ಪ್ರತಿ ಗೃಹಿಣಿಯೂ ಉದ್ಯೋಗಸ್ಥೆಯೂ ಒಂದಲ್ಲ ಒಂದು ಮಹಿಳಾ ಸಂಘಟನೆಗೆ ಮೊದಲು ಸದಸ್ಯಳಾಗಬೇಕು. ನಾನು ಕೆಲವು ಮಹಿಳಾ ಸಂಘಗಳಲ್ಲಿ ತೊಡಗಿದ್ದಾಗ ನನ್ನ ಪರಿಚಿತರನ್ನು ಸದಸ್ಯರಾಗಲು ಕೇಳ್ದಿದರೆ ಅವರಿಂದ ಬರುತ್ತಿದ್ದ ಪ್ರಶ್ನೆ ಒಂದೇ ಆಗಿರುತ್ತಿತ್ತು. "ಅದರಿಂದ ನಮಗೇನು ಪ್ರಯೋಜನ?" ನಾನು ಅವರಿಗೆ ಕೊಡುತ್ತಿದ್ದ ಉತ್ತರ "ನೀವು ಧರ್ಮವನ್ನು ರಕ್ಷಿಸಿ ಅದು ನಿಮ್ಮನ್ನು ರಕ್ಷಿಸುತ್ತದೆ ಎನ್ನುವ ವೇದ ವಾಕ್ಯ ಕೇಳಿದ್ದೀರಲ್ಲ ಹಾಗೆ ಮೊದಲು ನೀವು ಸಂಘವನ್ನು ಬೆಳೆಸಿ, ನಂತರ ಅದು ನಿಮ್ಮನ್ನು ಬೆಳೆಸುತ್ತದೆ."

ನಮ್ಮ ಗೃಹಿಣಿಯರು ಈ ದಿಕ್ಕಿನಲ್ಲಿ ಮೊದಲು ಯೋಚಿಸಬೇಕು "ನನ್ನ ಬಿಡುವಿನ ವೇಳೆಯನ್ನು ಅರ್ಥಪೂರ್ಣವಾಗಿ ಮತ್ತು ನನ್ನ ಅರಿವನ್ನು ವಿಸ್ತರಿಸುವಂತೆ ಕಳೆಯಲು ಮಹಿಳಾ ಸಂಘಟನೆಗಳ ಅಗತ್ಯವಿದೆ" ಎನ್ನುವುದು. ಹತ್ತು ರೂ. ಖರ್ಚು ಮಾಡಿದರೆ ಒಂದು ಛಾಕೋಲೇಟನ್ನು ತಂದು ತಿನ್ನುವ ಸುಖದ ಕೊಡುಕೊಳ್ಳುವಿಕೆಯ ಬಾಬತ್ತಲ್ಲ ಇದು. ಮಹಿಳಾ ಸಮಾಜಗಳೆಂದರೆ ನಿಮ್ಮ ಅರಿವಿನ ಬದುಕನ್ನು ಹಸನು ಮಾಡುವ ವೇದಿಕೆ. ನಿಮ್ಮೊಳಗಿನ ಪ್ರತಿಭೆಗೆ, ತುಡಿತಕ್ಕೆ, ಆಸಕ್ತಿಗಳಿಗೆ ಅನುಭವಗಳನ್ನು ಹಂಚಿಕೊಳ್ಳಲು ಅವಕಾಶಗಳನ್ನು ಒದಗಿಸುವ ತಾಣ. ಅನೇಕ ಮಹಿಳೆಯರು ತಮ್ಮ ಬಿಡುವಿನ ವೇಳೆಯನ್ನು ಅಕ್ಕಪಕ್ಕದವರೊಂದಿಗೆ ಕಾಡು ಹರಟೆ ಹೊಡೆಯುತ್ತಲೋ ಅಥವಾ ಒಂದಿಷ್ಟೂ ಜ್ಞಾನವನ್ನು ಹೆಚ್ಚಿಸದ ಟೀವಿ ಸೀರಿಯಲ್‌ಗಳನ್ನು ನೋಡುತ್ತಲೋ ಕಳೆದುಬಿಡುತ್ತಾರೆ. ಈ ಕ್ರಿಯೆಗಳು ಮನಸ್ಸನ್ನು ಅದೇ ಅದೇ ಹಳೆಯ ವಿಚಾರಗಳ ಸೀಮಿತ ಬಾವಿಯೊಳಗೆ ತಳ್ಳಿಬಿಡುತ್ತವೆ. "ಹೆಣ್ಣು ಎಂದರೆ ಸಣ್ಣ ಚೌಕಟ್ಟು" ಎನ್ನುವ ನಿರಾಶಾವಾದವನ್ನು ಬಿತ್ತಿಬಿಡುತ್ತವೆ.

ಇಂದು ಮಹಿಳೆಯ ಪ್ರಪಂಚ ವಿಸ್ತಾರವಾಗಿದೆ. ಅಡುಗೆ, ಮನೆ, ಗಂಡ, ಮಕ್ಕಳು ಎನ್ನುವ ಗೂಟಕ್ಕೆ ಅಷ್ಟೆ ನಮ್ಮನ್ನು ನಾವು ಕಟ್ಟಿಕೊಂಡಿರಬೇಕಿಲ್ಲ. ಹಾಗೆ ಇಷ್ಟಕ್ಕೇ ಸೀಮಿತವಾಗಿದ್ದರೆ ಕಲ್ಪನಾ ಚಾವ್ಲಳಂತ ಮಹಿಳೆ ಗಗನಯಾತ್ರಿಯಾಗಿ ಹೋಗುತ್ತಿರಲಿಲ್ಲ. ಕಿರಣ್ ಬೇಡಿ, ಜೀಜಾ ಹರಿಸಿಂಗ್, ಬೆಂಗಳೂರಿನ ಸುಮಂಗಲಿ ಸೇವಾಶ್ರಮದ ಸುಶೀಲಮ್ಮ ಇವರೆಲ್ಲ ಅಪ್ರತಿಮ ಸಾಧನೆ ಮಾಡುತ್ತಿರಲಿಲ್ಲ. ಈಗ ಕಾಲ ಬದಲಾಗಿದೆ. ಗೃಹಿಣಿಯರಿಗೆ ಬೇಕಾದಷ್ಟು ಬಿಡುವಿದೆ. ಸಣ್ಣ ಚೌಕಟ್ಟಿನಿಂದ ಬಿಡಿಸಿಕೊಂಡು ಹೊರಬರಲು ಸಾಧ್ಯವಿದೆ. ಈ ಸತ್ಯವನ್ನು ಪ್ರತಿ ಮಹಿಳೆ ಅರಿಯಬೇಕಾಗಿದೆ.

*13ನೇ ಪುಟದಲ್ಲಿ ಮುಂದುವರಿದಿದೆ*

# ಸಮಕಾಲೀನ ಮಹಿಳಾ ಸಾಹಿತ್ಯದಲ್ಲಿ ಬಹುಸ್ತರೀಯ ಅನುಭವಗಳು

– ಡಾ|| ಎಲ್. ಜಿ. ಮೀರಾ

ನಾವು ಬದುಕುತ್ತಿರುವ ಪ್ರಸ್ತುತ ಸಂದರ್ಭದಲ್ಲಿ ಪ್ರಕಟಗೊಳ್ಳುತ್ತಿರುವ ಮಹಿಳೆಯರ ಕಥೆ ಮತ್ತು ಕಾದಂಬರಿಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ''ಸಮಕಾಲೀನ ಮಹಿಳಾ ಸಾಹಿತ್ಯದಲ್ಲಿ ಬಹುಸ್ತರೀಯ ಅನುಭವಗಳು'' ಎಂಬ ಈ ವಿಚಾರದ ಬಗ್ಗೆ ಇಲ್ಲಿ ಚಿಂತನೆ ನಡೆಸಲಾಗಿದೆ.

ನಮ್ಮ ಸುತ್ತಲಿನ ಬದುಕನ್ನು ಗಮನಿಸಿದಾಗ ವೇಗ ಗತಿಯಲ್ಲಿ ಬದಲಾಗುತ್ತಿರುವ ಬದುಕಿನ ಲಯದೊಂದಿಗೆ ಸ್ತ್ರೀ ಪ್ರತೀಕಗಳು ಕೂಡ ಬದಲಾಗುತ್ತಿರುವುದು ಮೇಲ್ನೋಟಕ್ಕೆ ಕಾಣಿಸುವ ವಿಚಾರ. ಹೆಣ್ಣೆಂದರೆ 50 ವರ್ಷಗಳ ಹಿಂದೆ ಸೌಟು ಹಿಡಿದ ಗೃಹಲಕ್ಷ್ಮಿ ನೆನಪಾಗುತ್ತಿದ್ದಾಳೇನೋ ? ಆದರೆ ಇವತ್ತು ಹೆಣ್ಣು ಎಂದರೆ ಹಳ್ಳಿಯ ಗಾಮಪಂಚಾಯತ್‌ನ್ನ ಅಧ್ಯಕ್ಷಿಣಿ, ಸಮವಸ್ತ್ರತೊಟ್ಟಿರುವ ಸ್ತ್ರೀ ಪೈಲಟ್, ಪೆಟ್ರೋಲ್ ಬಂಕಿನಲ್ಲಿ ಪೆಟ್ರೋಲ್ ಹಾಕುವ ಮಹಿಳೆ, ಬಸ್ ಟಿಕೆಟ್ ಹರಿಯುವ ಲೇಡಿ ಕಂಡೆಕ್ಟರ್, ದೇಶದಿಂದ ದೇಶಕ್ಕೆ ವಿಮಾನದಲ್ಲಿ ಹಾರುವ ಮಹಿಳಾ ಉದ್ಯಮಿ, ಅಮರಣಾಂತ ಉಪವಾಸ ಮಾಡುವ ಜನಪರ ಚಳುವಳಿಯ ನಾಯಕಿ, ಸಿನಿಮಾ-ನಾಟಕಗಳ ನಿರ್ದೇಶಕಿಯರು, ಮೊಬೈಲ್ ಕಿವಿಗಿಟ್ಟು ವಾಹನ ಓಡಿಸುವ ವಿದ್ಯಾರ್ಥಿನಿಯರು, ಉದ್ಯೋಗಸ್ಥ ಮಹಿಳೆಯರು... ಇವರೆಲ್ಲರೂ ನೆನಪಾಗುತ್ತಾರೆ. ಹೆಣ್ಣಿನ ಪ್ರತೀಕವು ಅದೆಷ್ಟು ವೈವಿಧ್ಯಮಯವಾಗಿ ನಮ್ಮ ಕಣ್ಣಿಗೆ ಕಾಣುತ್ತದೆ ! ಜೀವನದಲ್ಲಿ ಸ್ತ್ರೀ ಪ್ರತೀಕ ಇಷ್ಟು ಬದಲಾಗುತ್ತಿದೆ ಅಂದ ಮೇಲೆ ಜೀವನದ ಗತಿಬಿಂಬವಾದ ಮತ್ತು ಲೇಖಕಿಯರಿಗೆ ಸ್ವಾಭಿವ್ಯಕ್ತಿಯ ಮಾಧ್ಯಮವೂ ಆದ ಸಾಹಿತ್ಯದಲ್ಲಿ ಸ್ತ್ರೀ ಪ್ರತೀಕಗಳು ಬದಲಾಗಬೇಕಲ್ಲವೇ ? ಅಥವಾ ಬದಲಾಗಿವೆಯೇ ? ಇವತ್ತು ರಚನೆಯಾಗುತ್ತಿರುವ ಕಥೆಗಳು ಮತ್ತು ಕಾದಂಬರಿಗಳಲ್ಲಿ ಸ್ತ್ರೀಯರು ಹೇಗೆ ಕಾಣಿಸುತ್ತಿದ್ದಾರೆ ? ಮಹಿಳಾ ಸಾಹಿತ್ಯದಲ್ಲಿ ಮಾಡುತ್ತಿರುವ ಜೀವನಾನುಭವಗಳು ಎಂಥವು ? ಈ ಎಲ್ಲ ಪ್ರಶ್ನೆಗಳು ಕಾಡುತ್ತವೆ.

ಲೇಖಕಿಯರ ಕಥೆ, ಕಾದಂಬರಿಗಳನ್ನು ಒಟ್ಟಿಗೆ ನೋಡಿದಾಗ ಥಟ್ಟನೆ ಒಂದು ವಿಚಾರ ನಮ್ಮ ಮನಸ್ಸಿಗೆ ಹೊಳೆಯುತ್ತದೆ. ಬಹುಸ್ತರೀಯವಾದ ಜೀವನಾನುಭವ ಮಹಿಳಾ ಸಾಹಿತ್ಯಕ್ಕೆ ಅದೆಂಥ ವೈವಿಧ್ಯವನ್ನು ತಂದುಕೊಟ್ಟಿದೆ ಎಂಬ ವಿಚಾರ ಅದು. ಕನ್ನಡ ಸಾಹಿತ್ಯದ ಆಧುನಿಕ ಯುಗದ ಪ್ರಾರಂಭದಲ್ಲಿ ನಂಜನಗೂಡು ತಿರುಮಲಾಂಬ ಅವರು ಬರೆಯಲು ಪ್ರಾರಂಭಿಸಿದ್ದಾಗ ಮಧ್ಯಮವರ್ಗದ ಯಾವುದೋ ಒಂದೆರಡು ಜಾತಿಗಳ ಲೇಖಕಿಯರು ಮಾತ್ರ ಬರೆಯುವಂತೆ ತೋರುತ್ತಿತ್ತು. ಆದರೆ ಇವತ್ತು ಸುಮಾರು ನೂರು ವರ್ಷಗಳ ನಂತರ ವಿವಿಧ ವರ್ಗ, ವಿವಿಧ ಜಾತಿ, ವಿವಿಧ ಧರ್ಮಗಳ ಲೇಖಕಿಯರು ಬರೆಯುತ್ತಿದ್ದಾರೆ. ಕುಟುಂಬಿನಿಯ ಕಥೆಗಳಷ್ಟೇ ಪ್ರಮಾಣದಲ್ಲಿ ಉದ್ಯೋಗಸ್ಥ ಮಹಿಳೆಯರ ಕಥೆಗಳೂ ಬರುತ್ತಿವೆ. ಕರ್ನಾಟಕದ ವಿವಿಧ ಭಾಗಗಳಿಂದ ವಿಭಿನ್ನ ಕನ್ನಡದಲ್ಲಿ ಲೇಖಕಿಯರ ಕಥೆ, ಕಾದಂಬರಿಗಳು ಹೊರಬರುತ್ತಿವೆ. ಮಹಿಳೆ ಮತ್ತು ಸಮಾಜದ ಸಂಬಂಧವನ್ನು ಶೋಧಿಸುವ ಕಥನ ಸಾಹಿತ್ಯಕ್ಕೆ ಪ್ರತಿಸ್ಪರ್ಧಿಯಂತೆ ಮಹಿಳೆಯ ಅಂತರಾಳದ ಸೂಕ್ಷ್ಮಗಳನ್ನು, ಸ್ವಗತಗಳನ್ನು ಭಾಷೆಯಲ್ಲಿ ಪಡಿಮೂಡಿಸುವ ಕಥೆ, ಕಾದಂಬರಿಗಳು ಲೇಖಕಿಯರಿಂದ ಸೃಷ್ಟಿಯಾಗುತ್ತಿವೆ. ಉದಾಹರಣೆಗೆ ಹೇಳುವುದಾದರೆ ದಕ್ಷಿಣ ಕನ್ನಡದ ಬ್ರಾಹ್ಮಣ ಹೆಂಗಸರ ಜೀವನವನ್ನು ವೈದೇಹಿ ಚಿತ್ರಿಸಿದರೆ, ಅದೇ ಪ್ರದೇಶದ ಶೂದ್ರ ಹೆಂಗಸರ ಜೀವನವನ್ನು ಹೆಚ್. ನಾಗವೇಣಿ ಚಿತ್ರಿಸುತ್ತಾರೆ. ಬೆಂಗಳೂರಿನ ವೇಗದ ಬದುಕಿನಲ್ಲಿ ಸ್ತ್ರೀ ಅನುಭವಿಸುವ ತಲ್ಲಣಗಳನ್ನು ನೇಮಿಚಂದ್ರ, ಸುಮಂಗಲಿ, ಮುಂತಾದವರು ಚಿತ್ರಿಸಿದರೆ, ಬಯಲು ಸೀಮೆಯ ಹಳ್ಳಿಗಳ ಸ್ತ್ರೀಯರ ಬದುಕನ್ನು ಎಂ.ಎಸ್. ವೇದ ಚಿತ್ರಿಸುತ್ತಾರೆ. ಉತ್ತರ ಕರ್ನಾಟಕದ ಸುಶಿಕ್ಷಿತ ಹೆಂಗಸರ ಬದುಕನ್ನು ಹೇಮಪಟ್ಟಣ ಶೆಟ್ಟಿಯವರು ಚಿತ್ರಿಸಿದರೆ, ಅದೇ ಪ್ರದೇಶದ ಕೊಳೆಗೇರಿಯ ಅಶಿಕ್ಷಿತ ಬದುಕನ್ನು ಗೀತಾ ನಾಗಭೂಷಣ್ ಚಿತ್ರಿಸುತ್ತಾರೆ. ಮುಸ್ಲಿಂ ಹೆಣ್ಣು ಮಕ್ಕಳ ಬದುಕನ್ನು ಸಾ.ರಾ. ಅಬೂಬಕ್ಕರ್, ಭಾನು ಮುಷ್ತಾಕ್ ಚಿತ್ರಿಸುತ್ತಾರೆ. ಒಟ್ಟಿನಲ್ಲಿ ನಗರ-ಗ್ರಾಮ, ಬ್ರಾಹ್ಮಣ-ದಲಿತ, ಕುಟುಂಬ-ಉದ್ಯೋಗ ಕ್ಷೇತ್ರ, ಹಿಂದೂ-ಮುಸ್ಲಿಂ, ಯೌವ್ವನ-ಮುಪ್ಪು ಭಾರತ-ವಿದೇಶ ಎನ್ನದೆ ಜೀವನದ ಎಲ್ಲ ಮುಡುಕು-ಮೂಲೆಗಳಿಂದಲೂ ಲೇಖಕಿಯರು ಅನುಭವಗಳನ್ನು ಹೊತ್ತು ತಂದು ಕನ್ನಡದ ಕಥೆಯ ಪಾತ್ರೆಗೆ ಸುರಿಯುತ್ತಿದ್ದಾರೆ. ಜೀವನದ ದ್ರವ್ಯದ ದೃಷ್ಟಿಯಿಂದ ಮಹಿಳಾ ಕಥನ ಸಾಹಿತ್ಯವು ಅಪಾರವಾದ ವೈವಿಧ್ಯವನ್ನು

ತೋರುತ್ತದೆ. ಇದೇನೋ ಸರಿ ಸಂಭ್ರಮಪಡುವಂತಹ ವಿಷಯವೇ ಇದು. ಆದರೆ ವಿವಿದೆಡೆ ಕನ್ನಡದ ಕಥೆಯ ಪಾತ್ರಗೆ ಬಂದು ಬೀಳುತ್ತಿರುವ ಜೀವನದ್ರವ್ಯವು ಹೇಗಿದೆ? ಲೇಖಕಿಯರು ಈ ಎಲ್ಲ ಕಡೆಯಿಂದ ತರುತ್ತಿರುವ ಅನುಭವಗಳು ಹೇಗಿವೆ? ಅವರು ಚಿತ್ರಿಸುತ್ತಿರುವುದು ಏನನ್ನು? ಬದಲಾಗಿರುವ ಹೆಂಗಸನ್ನೋ ಅಥವಾ ಬದಲಾಗಿರುವ ಬದುಕನ್ನೋ? ಈ ಮುಖ್ಯ ಪ್ರಶ್ನೆಯು ಮನಸ್ಸನ್ನು ಎಡೆಬಿಡದೆ ಕಾಡುತ್ತದೆ.

ಲೇಖಕಿಯ ಕಥನ ಸಾಹಿತ್ಯದ ಸ್ವರೂಪವನ್ನು ಒಟ್ಟಂದದಲ್ಲಿ ಅರ್ಥಮಾಡಿಸಿಕೊಳ್ಳಲು ಪ್ರಯತ್ನಿಸಿದಾಗ ಮೂರು ಅಂಶಗಳ ಬಗ್ಗೆ ನಮ್ಮ ಗಮನವು ಕೇಂದ್ರೀಕೃತವಾಗುತ್ತದೆ.

1. ಲೇಖಕಿಯರ ಕಥೆ ಸಾಹಿತ್ಯದಲ್ಲಿ ಹೆಣ್ಣಿನ ಸ್ವಗತಗಳು ಅಥವಾ ಹೆಣ್ಣಿನ ಅಸ್ಮಿತೆ.
2. ಹೆಣ್ಣು-ಗಂಡುಗಳ ಸಂಬಂಧ
3. ಹೆಣ್ಣು ಮತ್ತು ಸಮಾಜದ ಸಂಬಂಧ.

ಈ ಮೂರು ಎಳೆಗಳನ್ನು ಹಿಡಿದು ಜಗ್ಗಿದರೆ ಲೇಖಕಿಯರ ಸಾಹಿತ್ಯದ ಹಾಸುಹೊಕ್ಕು ನಮ್ಮ ಮುಂದೆ ಬಿಚ್ಚಿಕೊಳ್ಳ-ಬಹುದು. ಇವುಗಳನ್ನು ಒಂದೊಂದಾಗಿ ವಿವರಿಸಿಕೊಳ್ಳೋಣ.

**1) ಲೇಖಕಿಯರ ಕಥನ ಸಾಹಿತ್ಯದಲ್ಲಿ ಹೆಣ್ಣಿನ ಸ್ವಗತಗಳು ಅಥವಾ ಅಸ್ಮಿತೆ :** ಇಲ್ಲಿ ಪ್ರಶ್ನೆ ಏನೆಂದರೆ ಹೆಣ್ಣು ತನ್ನ ಬಗ್ಗೆ ತಾನು ಹೇಗೆ ಯೋಚಿಸುತ್ತಾಳೆ ಎಂದು. ಸಮಕಾಲೀನ ಕಥಾಸಾಹಿತ್ಯದ ಸ್ತ್ರೀ ಪಾತ್ರವು ನೀತಿ-ಅನೀತಿಗಳ ಹಂಗನ್ನು ತೊರೆದು ತನ್ನನ್ನು ತಾನು ಶೋಧೀಸಿಕೊಳ್ಳುವುದಕ್ಕೆ ಕಾಣಬಹುದು. ನೇಮಿಚಂದ್ರ ಅವರ "ಸಂಜೆಗಳು ಎಷ್ಟು ಸುಂದರ" ಎಂದ ಕಥೆಯಲ್ಲಿ ಆದರ್ಶಪ್ರೇಮವನ್ನು ಬಯಸುವ ಹೆಣ್ಣೊಬ್ಬಳು ವಿವಿಧ ಗಂಡಸರೊಂದಿಗಿನ ತನ್ನ ಪ್ರೇಮ ಜೀವನವನ್ನ ಮೆಲುಕು ಹಾಕುತ್ತ ಹೀಗೆ ಯೋಚಿಸುತ್ತಾಳೆ "...ಯಾರನ್ನೇ ಆಗಲೀ ಜೀವನವಿಡೀ ಜೊತೆಗಿದ್ದು, ಸಾಯುವವರೆಗೂ ಏಕೀಕೃತವಾಗಿ ಪ್ರೀತಿಸಿದರೆ ಪ್ರೀತಿ ಎಂದಲ್ಲ, ಪ್ರೀತಿ ಶಾಶ್ವತವಿರಬಹುದು, ಪ್ರೀತಿಸುವವರು ಹಾಗಲ್ಲವಲ್ಲ. ಕೇವಲ ಒಂದು ದಿನ, ಒಂದು ಗಂಟೆ, ಒಬ್ಬನನ್ನು ಪ್ರೀತಿಸಿ ಅಲ್ಲೇ ಮರೆಯಬಲ್ಲದೇನೋ ಮನಸ್ಸು ಇಂಥ ಕ್ಷಣ-ಕ್ಷಣಗಳನ್ನು ಗುಡ್ಡೆಹಾಕಿದಾಗ ಅಲ್ಲಿ ವ್ಯಭಿಚಾರವಲ್ಲ ಬದುಕು ಬೆಳೆದಿದೆ".

ಪತಿನಿಷ್ಠೆ, ಪಾತಿವ್ರತ್ಯ, ಶುದ್ಧತೆ,... ಮುಂತಾದ ಸಾಂಪ್ರದಾಯಿಕ ಮೌಲ್ಯಗಳನ್ನೇ ನೆಚ್ಚಿಕೊಳ್ಳುವ ಪ್ರಧಾನ ವಾಹಿನಿಯ ಬದುಕಿನ ಕ್ರಮಕ್ಕೆ ಪ್ರೇಮದ ಬಗೆಗಿನ ಮೇಲಿನ ವಿಶ್ಲೇಷಣೆ ಆಘಾತವನ್ನು ಉಂಟುಮಾಡಬಹುದು. ಸ್ತ್ರೀಯ ಸೂಕ್ಷ್ಮಾತಿಸೂಕ್ಷ್ಮ ಭಾವಗಳನ್ನು ಪ್ರಾಮಾಣಿಕವಾಗಿ ಅಭಿವ್ಯಕ್ತಿಸುವ ಕ್ರಮ ಈಗಿನ ಲೇಖಕಿಯರಲ್ಲಿ ಕಾಣುತ್ತದೆ. ಸಿ.ಎಸ್. ಸರ್ವಮಂಗಳ ಅವರು 'ಲಹರಿ' ಎಂಬ ಕಥೆಯಲ್ಲಿ, ಕಣ್ಣಿನ ಆಸ್ಪತ್ರೆಯಲ್ಲಿ ಕುಳಿತು, ಡಾಕ್ಟರ್‌ನೊಬ್ಬನ ಗಮನದ ಕೇಂದ್ರವಾದ ತರುಣಿಯ ಮನಸ್ಥಿತಿಯನ್ನು ಹೀಗೆ ಚಿತ್ರಿಸುತ್ತಾರೆ...."ಅಪರಿಚಿತ ಗಂಡೊಬ್ಬನ ಗಮನದ ಕೇಂದ್ರವಾಗಿ ಒಂದು ಸೂಕ್ಷ್ಮಸುಖ ಅನುಭವಿಸುತ್ತಿದ್ದೆ. ಯಾವ ತಪ್ಪಿತಸ್ಥ ಭಾವದ ಸುಳಿವೂ ನನ್ನಲ್ಲಿರಲಿಲ್ಲ. ಅಪ್ಪನ ಮುಂದೆ ನನ್ನ ಭಾವನೆಗಳನ್ನೆಲ್ಲಾ ತೆರೆದಿಟ್ಟರೆ....ಗೋವಿಂದ! ಆದರೆ ಆಗೀಗ ಹಾದುಹೋಗುವ ಇಂಥ ಸೂಕ್ಷ್ಮ ಸ್ಪಂದನಗಳು ಮನುಷ್ಯ ಸಹಜ ತಾನೆ? ಹೆಣ್ಣಿನನುಭವದ ಭಾಗವಾಗಿ ಸುಮ್ಮನೆ ಅದನ್ನು ಗುರುತಿಸಿಕೊಳ್ಳುವುದರಲ್ಲಿ ಯಾವ ತಪ್ಪಿದೆ ಎಂದು ತರ್ಕಿಸುತ್ತಿದ್ದೆ."

ನೈತಿಕ-ಅನೈತಿಕಗಳ ಹಂಗಿಲ್ಲದೆ ಈ ರೀತಿಯ ಭಾವಗಳನ್ನು ಲೇಖಕಿಯರು ಅಭಿವ್ಯಕ್ತಿಸುತ್ತಿದ್ದಾರೆ. ಪ್ರೇಮ, ಮುಟ್ಟು, ಬಸಿರು, ಹೆರಿಗೆ ನೋವು, ಅತ್ಯಾಚಾರ..ಮುಂತಾದ ಎಲ್ಲ ಸ್ತ್ರೀ ಸಂವೇದಿ ಭಾವಗಳಿಗೂ ಲೇಖಕಿಯರ ಕಥೆಗಳಲ್ಲಿ ಅಭಿವ್ಯಕ್ತಿ ...ದೊರೆತಿದೆ. ಶೀಲ-ಅಶ್ಲೀಲ, ನೈತಿಕ-ಅನೈತಿಕ, ಸ್ವೀಕಾರ-ತಿರಸ್ಕಾರ ಇವುಗಳ ಹಂಗಿಲ್ಲದೆ ಲೇಖಕಿಯರು ಹೆಣ್ಣಿನ ಮನಸ್ಸನ್ನು ಶೋಧವನ್ನು ಮಾಡಿರುವುದನ್ನು ಕಾಣಬಹುದು. ಹೆಚ್.ಎಸ್. ಚಂಪಾವತಿ ಅವರ 'ಶಿವಗಂಗಾ' ಕಾದಂಬರಿ ಶಾಂತಾಕುಮಾರಿಯವರ 'ಮುಟ್ಟು' ಎಂಬ ಕಥೆ, ನೇಮಿಚಂದ್ರ ಅವರ ಅನೇಕ ಕಥೆಗಳು ಇದಕ್ಕೆ ಸಾಕ್ಷಿ.

**2) ಹೆಣ್ಣು-ಗಂಡುಗಳ ಸಂಬಂಧ :-** ಈ ವಿಷಯ-ವನ್ನೂ ಕೂಡ ಸಮಕಾಲೀನ ಲೇಖಕಿಯರು ತುಂಬಾ ಸೂಕ್ಷ್ಮವಾಗಿ ವಿಶ್ಲೇಷಣೆ ಮಾಡಿದ್ದಾರೆ. ನೇಮಿಚಂದ್ರ ಅವರ ಕಥೆಗಳು, ರೇಖಾರಾಣಿಯವರ ಕಥೆಗಳು, ಸರ್ವಮಂಗಳ ಸಿ. ಎಸ್., ಶಾಂತಾಕುಮಾರಿ ಎಲ್.ವಿ. ಇವರ ಕಥೆಗಳು, ಗಂಡು - ಹೆಣ್ಣಿನ ಸಂಬಂಧದ ವಿವಿಧ ಮಗ್ಗುಲುಗಳನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸಿದ್ದಾರೆ. "ಮತ್ತೆ ಬರೆದ ಕವನಗಳು" ಎಂಬ ಕಥೆಯಲ್ಲಿ ಪ್ರೀತಿಯ ಬಗ್ಗೆ ಕನಸು ಕಂಡ ಹುಡುಗಿ ಇದ್ದಕ್ಕಿದ್ದಂತೆ ಭೇಟಿಯಾದ ಪ್ರಿಯ ವ್ಯಕ್ತಿಯ ಜೊತೆಗೆ ಸಾರ್ಥಕತೆ ಕಾಣುವ ಆದರೆ ಆ ಸಂಬಂಧವನ್ನು ಅಲ್ಲಿಗೇ

ಕತ್ತರಿಸುವ ನೆಲೆಯೊಂದನ್ನು ನೇಮಿಚಂದ್ರ ವಿವರಿಸಿದ್ದಾರೆ. ಹೆಣ್ಣಾಗಬೇಕು, ಹೆಣ್ತನವನ್ನು ಅನುಭವಿಸಬೇಕು ಎಂಬ ಬಯಕೆ, ಪ್ರೀತಿಯ ಹಂಬಲ-ಈ ಕಥೆಯಲ್ಲಿ ತುಂಬಾ ಸ್ಪಷ್ಟವಾಗಿ ಮೂಡಿದೆ.

"ನಾವು ಮಗಳಾದೆವು, ಹೆಂಡತಿಯಾದೆವು, ತಾಯಾದೆವು-ಹೆಣ್ಣಾಗದೆಯೇ ಬಿಸಿಗೆ ಕರಗದೆಯೇ ಫಲಿಸಿದೆವು, ಬಯಕೆಯ ಅದುಮಿಟ್ಟು ಬದುಕಿದೆವು. ಬರೀ ಕನಸಿನಲ್ಲಷ್ಟೇ ಬಿಸಿ ಏರಿ, ಸ್ಪರ್ಶಕ್ಕೆ ತಣ್ಣಗಾದೆವು. ಕೇವಲ ಕವನಗಳಲ್ಲಿ ಸ್ಫಲಿಸಿದೆವು, ವಾಸ್ತವದಲ್ಲಿ ಹಿಮಗಟ್ಟಿದೆವು. ನಾವು ಭಾರತೀಯರು, ಅಪ್ಪಟ ಭಾರತೀಯರು....ಮನೆ ತುಂಬಾ ಮಕ್ಕಳನ್ನು ಹೆತ್ತರೂ ಅಪ್ಪಟ ಕನ್ಯೆಯರು : ತನು-ಮನಗಳ ಸ್ಪರ್ಶಿಸದ ಗಂಡಂದಿರು. ಇಲ್ಲಿ 'ಫ್ರಿಜಿಡಿಟಿ' ರೋಗವಲ್ಲ, ಅಹಜವಲ್ಲ, ಹೆಣ್ಣಿನಸಹಜ ಸ್ಥಿತಿ ಎಂಬಂತ ಸಲೀಸಾಗಿ ಸ್ವೀಕರಿಸಿದ್ದು.

ಈ ಕಥೆಯಲ್ಲಿ ಅನು ಎಂಬ ಪಾತ್ರದ ಮೂಲಕ ಲೇಖಕಿಯು ತನು-ಮನಗಳು ಬೆಸೆಯುವ ಗಂಡು-ಹೆಣ್ಣಿನ ಆದರ್ಶ ಸಂಬಂಧ ಹೇಗಿರಬೇಕು ? ಮತ್ತು ಭಾರತೀಯ ಸಮಾಜದ ಸಾಂಪ್ರದಾಯಿಕ ಮದುವೆಗಳಲ್ಲಿ ಅದು ಹೇಗೆ ಯಾಂತ್ರಿಕವಾಗುತ್ತದೆ ಎಂಬುದನ್ನು ಕುರಿತು ವಿಶ್ಲೇಷಣೆ ಮಾಡಿದ್ದಾರೆ.

ನಗರಗಳ ಬದುಕು ಮತ್ತು ಆ ಬದುಕಿನಲ್ಲಿ ಅರಳುವ ಗಂಡು-ಹೆಣ್ಣಿನ ಸಂಬಂಧಗಳ ಕಥನ ನೇಮಿಚಂದ್ರ ಅವರಲ್ಲಿ ಕಾಣಿಸಿದರೆ, ಗೀತಾನಾಗಭೂಷಣ್ ಅವರ 'ಬದುಕು' ಎಂಬ ಕಾದಂಬರಿಯಲ್ಲಿ 'ಗ್ರಾಮೀಣ ಹಿನ್ನಲೆಯಲ್ಲಿ' ಗಂಡು-ಹೆಣ್ಣಿನ ಸಂಬಂಧವು ಚಿತ್ರವಾಗಿದೆ. ಇಲ್ಲಿ ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಅಧಿಕಾರ ಚಲಾಯಿಸುವ ಗಂಡುಗಳೂ ಇದ್ದಾರೆ. ಹಾಗೆಯೇ ತುಂಬಾ ನವಿರಾದ ಪ್ರೇಮವನ್ನು ತೋರುವ ಗಂಡುಗಳೂ ಇದ್ದಾರೆ. ತುಂಬು ಗರ್ಭಿಣಿಯಾದ ಹೆಂಡತಿಯನ್ನ ಸ್ವಲ್ಪವೂ ಕರುಣೆ ಇಲ್ಲದೆ ತನ್ನ ಕಾಮಸುಖಕ್ಕಾಗಿ ಪೀಡಿಸಿ ಬಲವಂತ ಸಂಭೋಗ ಮಾಡಿ ಅವಳನ್ನ ಸಾಯಿಸಿಯೇ ಬಿಡುವ ಗಂಡನ ಪಾತ್ರವೊಂದು 'ಬದುಕು' ಕಾದಂಬರಿಯಲ್ಲಿ ಬರುತ್ತದೆ. ತಾಯಿಯ ಸಾವಿನಿಂದ ಅಳುವ ಆರು ಮಕ್ಕಳ ಕಷ್ಟವನ್ನು ಗೀತಾ ಅವರು ಓದುಗರ ಮನ ಕರಗುವಂತೆ ಚಿತ್ರಿಸಿದ್ದಾರೆ. ಇಂಥ ಮೂರ್ಖ ಗಂಡಂದಿರು ಇರುವಂತೆ, ಹೆಂಡತಿಯನ್ನು ತುಂಬಾ ಪ್ರೀತಿಸುವ ಗಂಡಂದಿರೂ ಇರುತ್ತಾರೆ.

ಲೇಖಕಿಯರ ಕಥೆ, ಕಾದಂಬರಿಯನ್ನ ಗಮನಿಸಿದಾಗ, ಗಂಡು-ಹೆಣ್ಣಿನ ಸಂಬಂಧದಲ್ಲಿ ಪ್ರೇಮ, ಸಹಕಾರ, ಸಮಾನತೆಗಳ ಅಗತ್ಯ-ಇವುಗಳ ಕನಸು ಮೂಡಿರುವುದು ಕಾಣಿಸುತ್ತದೆ. ಪ್ರೇಮಮಯಿಯಾದ ಗಂಡು ಬರುವಂತೆ, ಶೋಷಕ ಗಂಡು ಬರುತ್ತಾನೆ. ಹೆಂಡತಿಯನ್ನ ಹೊಡೆದು, ಬಡೆದು ಸ್ಥೂಲ ಹಿಂಸೆಗೈಯ್ಯುವ ಗಂಡಸು ಬರುವಂತೆ (ಮುಸ್ಲಿಂ ಸಮಾಜದ ಕಥೆಗಳಲ್ಲಿ ಇಂಥ ಶೋಷಣೆ ತುಂಬಾ ಚಿತ್ರಿತವಾಗಿದೆ.) ಅವಳ ಕಷ್ಟವನ್ನು ಅರ್ಥಮಾಡಿಕೊಳ್ಳದೆ ಸೂಕ್ಷ್ಮವಾಗಿ ಹಿಂಸಿಸುವ ಗಂಡಂದಿರೂ ಬರುತ್ತಾರೆ. ಕೆ.ಆರ್. ಸಂಧ್ಯಾರೆಡ್ಡಿ ಅವರ 'ಒಬ್ಬ ಉದ್ಯೋಗಸ್ಥ ಹೆಣ್ಣಿ ಆತ್ಮಕಥೆ' ಎಂಬ ಕಥೆಯಲ್ಲಿ ಎಲ್ಲ ಮುಗಿಸಿ ಬೆಳಗಿನ ಜಾವವೇ ಹೊರಡಬೇಕಾದ ಹೆಂಡತಿಯ ಕಷ್ಟವನ್ನು ಅರ್ಥ ಮಾಡಿಕೊಳ್ಳದೇ ಹೋಗುವ ಗಂಡನೊಬ್ಬ ಬರುತ್ತಾನೆ. ಗಂಡು-ಹೆಣ್ಣಿನ ಸಂಬಂಧಗಳಲ್ಲಿ ಹೆಣ್ಣು ಬಯಸುವುದು ಸಹೃದಯತೆಯೇ ಹೊರತು, ಅವಲಂಬನೆ ಅಲ್ಲ ಎಂಬುದು ಓದುಗರಿಗೆ ವೇದ್ಯವಾಗುತ್ತದೆ.

**3) ಹೆಣ್ಣು ಮತ್ತು ಸಮಾಜದ ಸಂಬಂಧ :-** ಈ ವಿಷಯವೂ ಕೂಡ ಲೇಖಕಿಯರನ್ನು ಸಾಕಷ್ಟು ಕಾಡಿರುವಂಥದ್ದೇ, ಪುರುಷ ಪ್ರಧಾನ ಸಮಾಜವು ಹೆಣ್ಣನ್ನು ಶೋಷಿಸುವ ಬಗೆಗಳು ಒಂದೆರಡಲ್ಲ, ಲೇಖಕಿಯರ ಕಥೆಗಳನ್ನು ಓದುತ್ತಿದ್ದರೆ ಈ ಶೋಷಣೆಯ ಕಥೆಗಳು ಒಂದಾದ ಮೇಲೊಂದರಂತೆ ನಮ್ಮ ಮುಖಕ್ಕೆ ರಾಚುತ್ತದೆ. 'ಬದುಕು' ಕಾದಂಬರಿಯಲ್ಲಿ ಗಂಡಿನ ಅನುಕೂಲಕ್ಕೆ ಅಂದರೆ ಅವನ ಭೋಗ ಜೀವನಕ್ಕಾಗಿ ದೇವದಾಸಿ, ಜೋಗತಿಯರ-ನ್ನಾಗಿಸುವುದು ಕಾಣುತ್ತದೆ. ಇಂಥ ಹೆಣ್ಣುಮಕ್ಕಳ ನೋವಿನ ದನಿಗೆ ಗೀತಾನಾಗಭೂಷಣ್ 'ಮಾತು' ಕೊಟ್ಟಿದ್ದಾರೆ. ವಸುಂಧರ ಭೂಪತಿಯವರು 'ಅನಾವರಣ' ಎಂಬ ಕಥೆ ಬರೆದಿದ್ದಾರೆ. ಅವರಲ್ಲಿ ಬೇಜವಾಬ್ದಾರಿಯಾದ ಗಂಡನೊಬ್ಬ ಮನೆಯ ಬಗ್ಗೆ ಯೋಚಿಸದೆ ಹೊರಗೆ ಸಂಬಂಧ-ಗಳನ್ನಿಟ್ಟುಕೊಂಡು 'ಏಡ್ಸ್' ಕಾಯಿಲೆಯನ್ನು ಬರಿಸಿಕೊಳ್ಳುವ ಸನ್ನಿವೇಶವಿದೆ. ಅವನಿಂದ ನೊಂದ ಹೆಂಡತಿ ಹೀಗೆ ಯೋಚಿಸುತ್ತಾಳೆ "ಅವನ (ಗಂಡನ) ಯಾವೊಂದು ಮಾತಿಗೂ ಪ್ರತಿರೋಧ ತೋರದೆ ಎಲ್ಲವನ್ನೂ ಸಹಿಸಿ ಕೊಂಡು ಬಂದದ್ದು ತಪ್ಪಾಯಿತಾ ? ಅಪ್ಪ-ಅಮ್ಮ ಇದನ್ನೆ ನಮಗೆ ಕಲಿಸಿರುವುದು ತಾನೆ ?ಗಂಡ ದೇವರ ಸಮಾನ, ಅವನು ಏನು ಮಾಡಿದರೂ ಹೆಂಡತಿಗೆ ಕೇಳುವ ಹಕ್ಕಿಲ್ಲ ಅವನ ಸೇವೆ ಮಾಡಿಕೊಂಡು ಮಕ್ಕಳನ್ನ ಬೆಳೆಸಿ, ಅವನ ಮನೆ ಉದ್ಧಾರ ಮಾಡುವುದು ಮಾತ್ರ ಹೆಂಡತಿಯ ಕೆಲಸ...."

ಹೀಗೆ ಗಂಡನ ಮತ್ತು ಸಮಾಜದ ಕ್ರೂರ ನಿಲುವುಗಳಿಗೆ ಸಿಕ್ಕಿ ನರಳುವ ಹೆಂಗಸರ ಕಥೆಗಳು ಅನೇಕ ಇವೆ.

ಹೌದು ಮನುಷ್ಯರ ಮನಸ್ಸಿಗೆ ಅದರಲ್ಲೂ ಹೆಣ್ಣಿನ ಮನಸ್ಸಿಗೆ ಬೆಂಕಿಯಿಡುವಂತ ಪದ್ಧತಿಗಳು, ರೀತಿ-ರಿವಾಜು-ಗಳು, ದೃಷ್ಟಿಕೋನಗಳು, ನಮ್ಮ ಸಮಾಜದಲ್ಲಿ ಬೇಕಾದಷ್ಟಿವೆ. ಇಂತಹ ಪದ್ಧತಿಗಳ ಜೊತೆ ಹೋರಾಡುತ್ತಲೇ ಬದುಕಬೇಕಾದ ಅನೇಕ ಹೆಂಗಸರ ಕಥೆಯನ್ನು ಲೇಖಕಿಯರು ಬರೆದಿದ್ದಾರೆ. 'ಚೂರಿಯ ಹರಿತ' ಎಂಬ ಕಥೆಯನ್ನು ಶೈಲಜಾ ಹಾಸನ್ ಎನ್. ಅವರು ಬರೆದಿದ್ದಾರೆ. ಅದರಲ್ಲಿ ಕೂಲಿ ಮಾಡಿ ಜೀವಿಸುವ ಹೆಂಗಸೊಬ್ಬಳು ತನ್ನ ದಣಿಯಿಂದ ಬಸುರಾಗಿ ಒಬ್ಬ ಮಗಳಿಗೆ ಜನ್ಮಕೊಟ್ಟಿರುತ್ತಾಳೆ. ಆ ದಣಿಯ ಮಗ ಈ ಮಗಳನ್ನ ಕಾಮುಕವಾಗಿ ಕಾಡಲು ಬಂದಾಗ ನಾನು ನಿನ್ನ ತಂಗಿಯಂತೆ ಎಂದು ಎಷ್ಟು ಬೇಡಿಕೊಂಡರೂ ಅವನು ಕೇಳುವುದಿಲ್ಲ, ಆಗ ಆ ಮಗಳು ಒಂದು ಚಿಕ್ಕ ಚೂರಿಯಿಂದ ಅವನ ಮರ್ಮಾಂಗವನ್ನೇ ಕತ್ತರಿಸಿ ಬಿಸಾಡುವ ಸನ್ನಿವೇಶ ಬರುತ್ತದೆ. ಹೀಗೆ ಕಥೆಯ ನಂತರ ಕಥೆಯಲ್ಲಿ ಹೆಣ್ಣಿನ ಶೋಷಣೆಯ ವಿವಿಧ ಮಗ್ಗುಲುಗಳು ಅನಾವರಣಗುಳ್ಳುತ್ತಲೇ ಶಹನಾಜ ಎಂ. ಎಂಬವರ 'ಹೆಣ್ಣು' ಎಂಬ ಕಥೆಯಲ್ಲಿ ಮೊದಲ ರಾತ್ರಿಯ ದಿನ ತನ್ನ ಒರಟು ನಡವಳಿಕೆಯಿಂದಾಗಿ ಹೆದರಿದ ಹೆಂಡತಿ ತನ್ನೊಡನೆ ಸಹಕರಿಸದಿದ್ದಾಗ ಅವಳ ಸಮಸ್ಯೆಯನ್ನು ಅರ್ಥಮಾಡಿಕೊಳ್ಳುವ ಬದಲು ಆ ಗಂಡ ಅವಳು ಹೆಣ್ಣೇ ಅಲ್ಲ ಎಂಬ ತೀರ್ಮಾನಕ್ಕೆ ಬರುತ್ತಾನೆ. ಇವನ ಈ ಕ್ರೌರ್ಯಕ್ಕೆ ಇಂಬು ಕೊಡುವ ಕುಟುಂಬ ಆ ಹೆಣ್ಣಿನ ವಿರುದ್ಧ ಅಪಪ್ರಚಾರ ಮಾಡಿ ಅವನಿಗೆ ಇನ್ನೊಂದು ಮದುವೆ ಮಾಡುತ್ತದೆ. ನಂತರ ಈ ಹೆಣ್ಣಿಗೆ ಈ ಕಥೆಯಲ್ಲಿ ಬೇರೆ ಮದುವೆಯಾಯಿತಾದರೂ ಸುಳ್ಳು ಅಪವಾದದಿಂದ ಅವಳು ಪಡುವ ಕಷ್ಟ ಓದುಗರ ಮನಸ್ಸನ್ನು ತಟ್ಟುತ್ತದೆ.

## ಉಪಸಂಹಾರ

ಹೀಗೆ ಸಮಕಾಲೀನ ಲೇಖಕಿಯ ಕಥೆ, ಕಾದಂಬರಿಗಳಲ್ಲಿ ಬಹುಸ್ತರೀಯ ಜೀವನಾನುಭವಗಳು ಹೇಗೆ ಮೂಡಿವೆ ಎಂದು ನೋಡಿದಾಗ ನಮಗೆ ಒಂದು ವಿಷಯ ಸ್ಪಷ್ಟವಾಗುತ್ತದೆ. ಅದೇನೆಂದರೆ ಹೆಣ್ಣು ಬದಲಾಗಿದ್ದಾಳೆ ಆದರೆ ಸಮಾಜ ಬದಲಾಗಿಲ್ಲ, ತನ್ನನ್ನು ಮತ್ತು ಗಂಡು-ಹೆಣ್ಣಿನ ಸಂಬಂಧವನ್ನು, ಹೆಣ್ಣು ಮತ್ತು ಸಮಾಜಗಳ ಸಂಬಂಧವನ್ನು ಸೂಕ್ಷ್ಮವಾಗಿ ಗಮನಿಸಲು ಹೆಣ್ಣು ಕಲಿತಿದ್ದಾಳೆ-ಆದರೆ ಬದಲಾಗದಿರುವ ಸಮಾಜ ಅವಳಂತೆ ಮುಂದೆ ಚಲಿಸದೆ ಎಲ್ಲೋ ಹಿಂದೆ ಉಳಿದಿದೆ. ಈ ಕಥೆಗಳನ್ನು ಓದುವ ಮನಸ್ಸಾದರೂ ಹೆಣ್ಣಿನ ಕಷ್ಟಕ್ಕೆ ಮಿಡಿದು ಬದಲಾಗುತ್ತವೇನೋ ಎಂದು ಆಶಿಸಬಹುದೇ ? ಲೇಖಕಿಯರ ಕಥೆ, ಕಾದಂಬರಿಗಳು ಅರಣ್ಯರೋಧನವಾಗದೆ ಜನರು ಮನಸ್ಸು ಬದಲಾಯಿಸಿಕೊಳ್ಳಲು ಪ್ರೇರಣೆ ನೀಡುವ ಎಚ್ಚರಿಕೆಯ ಪಿಸುಮಾತುಗಳಾಗಲಿ ಎಂದು ಹಾರೈಸೋಣ. ಮನಸ್ಸುಗಳು ಬದಲಾಗುವುದು ಹೊರಗಿನ ಘೋಷಣೆ-ಗಳಿಂದಲ್ಲ ಒಳಗಿನ ಪ್ರೇರಣೆಗಳಿಂದ ಎಂಬುದು ನಮಗೆ ಗೊತ್ತು, ಅದು ಲೇಖಕಿಯರಿಗೂ ಗೊತ್ತು, ಅದಕ್ಕೆ ಈ ಕಥೆಗಳು ಹೆಣ್ಣಿನ ಕಷ್ಟಗಳನ್ನು ಸಮಾಜದೆದುರು ಬಿಡಿಸಿಟ್ಟು ಉಪದೇಶ ಮಾಡದೆ ಸುಮ್ಮಗಿವೆ. ಅವು ನಮ್ಮ ಆತ್ಮಸಾಕ್ಷಿಯ ಭಾಗವಾಗುತ್ತವೆಯೇ.

●

---

*9ನೇ ಪುಟದಿಂದ*

ಮಹಿಳಾ ಸಂಘಟನೆಗಳೂ ಅಷ್ಟೆ. ಅದೇ ಅಡುಗೆ, ಕೇಶ ಶೃಂಗಾರ, ಹೊಲಿಗೆ, ಕಸೂತಿ ಕಾರ್ಯಕ್ರಮಗಳೇ ಅಲ್ಲದೆ ಸಮಾಜವನ್ನು ಹೊಸ ರೀತಿಯಲ್ಲಿ ಕಟ್ಟುವ ಕಡೆಗೂ ಗಮನಹರಿಸಬೇಕಗಿದೆ. ಇಷ್ಟೆಲ್ಲ ಭ್ರಷ್ಟಾಚಾರ ತಾಂಡವ-ವಾಡುತ್ತಿರುವಾಗ, ಜಾತಿಜಾತಿಗಳ ಹೆಸರಿನಲ್ಲಿ ಮಾರಣ-ಹೋಮ ನಡೆಯುತ್ತಿರುವಾಗ, ಅನ್ಯಾಯ, ಅತ್ಯಾಚಾರಗಳು ವಿಜೃಂಭಿಸುತ್ತಿರುವಾಗ, ಇದಕ್ಕೂ ತನಗೂ ಏನೇನೂ ಸಂಬಂಧವಿಲ್ಲ ಎಂದು ಕೂತಿರುವುದ ಹೇಗೆ ? ಸರ್ಕಾರ ರಚಿಸಿರುವ ಸ್ತ್ರೀ ಸ್ವಸಹಾಯ (ಸ್ತ್ರೀ ಶಕ್ತಿ) ಪದ್ಧತಿಯಲ್ಲಿ ಲಕ್ಷಲಕ್ಷ ಗ್ರಾಮೀಣ ಮಹಿಳೆಯರು ತೊಡಗಿಸಿಕೊಂಡು ಉತ್ತಮ ಕೆಲಸ ಮಾಡುತ್ತಿದ್ದಾರೆ. ಅವರಲ್ಲಿ ಹೆಚ್ಚಿನವರು ಅವಿದ್ಯಾವಂತರು. ಆದರೆ ಹೊಸ ಅರಿವನ್ನು ಸ್ವೀಕರಿಸಲು ಉತ್ಸುಕರಾಗಿ ತೆರೆದ ಮನಸ್ಸುಳ್ಳವರು. ಅಂತಹವರಿಗೆ ವರದಕ್ಷಿಣೆ ಕೆಡುಕಿನ ಬಗ್ಗೆ, ಕುಡಿತದ, ಆನ್‌ಲೈನ್ ಲಾಟರಿಯ ಕೇಡಿನ ಬಗ್ಗೆ ಬಾಲ ದುಡಿಮೆ ಬಗ್ಗೆ ಅದನ್ನು ತಡೆಯುವ ಬಗ್ಗೆ ನಮ್ಮ ವಿದ್ಯಾವಂತ ಮಹಿಳಾ ಸಂಘಗಳು ಕೆಲಸ ಮಾಡಬೇಕು. ರೈತ ಮಹಿಳಾ ಸಂಘಟನೆಗಳೂ ಇಂದು ಚುರುಕಾಗಿ ಕೆಲಸ ಮಾಡುತ್ತಿವೆ. ನಮ್ಮ ನಗರದ ಸ್ತ್ರೀಯರ ಸಹಾಯ ಹಸ್ತ ಗ್ರಾಮೀಣ ಗೆಳತಿಯರವರೆಗೆ ಚಾಚಬೇಕು. ಆಗ ಮಾತ್ರ ನಿಜವಾದ ಸ್ತ್ರೀ ಶಕ್ತಿ ಹುಟ್ಟುತ್ತದೆ.

## ಕರ್ನಾಟಕ - ಉತ್ಕೃಷ್ಟ ಕಲೆ, ಸಾಹಿತ್ಯ ಸಂಸ್ಕೃತಿಗಳ ಬೀಡು

ಸಾವಿರಾರು ವರ್ಷಗಳ ಶ್ರೇಷ್ಠ ಸಂಸ್ಕೃತಿ, ಶ್ರೀಮಂತ ಕಲೆ, ಅನುಪಮ ಸಾಹಿತ್ಯ ಭಂಡಾರ ಹೊಂದಿರುವ ಕರ್ನಾಟಕದ ವೈಭವವನ್ನು ದೇಶದ ಉದ್ದಗಲಕ್ಕೂ ಮೆರೆಸಿದ ಹಿರಿಮೆ ಕನ್ನಡಿಗರದ್ದು. ಸಾಮಾಜಿಕ ಸಮಾನತೆ, ಹೃದಯ ವೈಶಾಲ್ಯತೆ ಮೂಲ ಸೆಲೆಯಲ್ಲಿ ಮೂಡಿಬಂದ ಈ ನಾಡಿನ ವಚನ ಸಾಹಿತ್ಯ ಮತ್ತು ದಾಸ ಸಾಹಿತ್ಯಗಳು ಸದಾ ಪ್ರಸ್ತುತ. ಅವು ಮನುಕುಲಕ್ಕೆ ಸಂದ ಅಭೂತಪೂರ್ವ ಕೊಡುಗೆಗಳು.

ದೇಶದ ಕಲೆ, ಸಾಹಿತ್ಯ, ಕ್ರೀಡೆ, ವಿಜ್ಞಾನ, ತಂತ್ರಜ್ಞಾನಗಳಂತಹ ಮಹತ್ತರ ರಂಗಗಳಲ್ಲಿ ಮಹೋನ್ನತ ಕಾಣಿಕೆ ನೀಡಿದ ಕರ್ನಾಟಕವನ್ನು ಮತ್ತಷ್ಟು ಸಮೃದ್ಧಗೊಳಿಸಬೇಕೆಂಬುದೇ ಸರ್ಕಾರದ ಧೃಢ ಸಂಕಲ್ಪ. ಪ್ರಾದೇಶಿಕ ಅಸಮತೋಲನ ನಿವಾರಣೆಗೆ ಒತ್ತು ನೀಡಿರುವ ಸರ್ಕಾರ ಉತ್ತರ ಕರ್ನಾಟಕದ ಸರ್ವಾಂಗೀಣ ಅಭಿವೃದ್ಧಿಗೆ ಪ್ರಾಶಸ್ತ್ಯ ನೀಡಿ ಕಾರ್ಯಪ್ರವೃತ್ತವಾಗಿದೆ.

ಕರ್ನಾಟಕ ವಾರ್ತೆ

# ಬಾವಿಯಲ್ಲಿ ಶಿಶುಗಳು

-ಕಲ್ಪನಾ ಶರ್ಮ

ಈ ಕಥೆ ನಮ್ಮ ಪತ್ರಿಕೆಯ ಮುಖಪುಟಗಳಲ್ಲಿ ಕಾಣಿಸಿಕೊಳ್ಳಬೇಕಿತ್ತು, ಆದರೆ ಹಾಗಾಗಲಿಲ್ಲ. ನಾವು ಭಾರತದ ಪ್ರಗತಿಯ ಬಗ್ಗೆ ಸಂಭ್ರಮದಿಂದ ಮಾತನಾಡುವಾಗ ಈ ದೇಶದ ಉಳಿದ ವಾಸ್ತವಗಳು ನೆನಪಾಗುವುದೇ ಇಲ್ಲ.

ಪತ್ರಿಕೆಗಳಲ್ಲಿ ತಪ್ಪಿ ಹೋಗಲೇಬಾರದ ಅಂತಹ ವಾಸ್ತವದ ಸತ್ಯವೊಂದನ್ನು ಇತ್ತೀಚೆಗೆ ಪಂಜಾಬಿನಲ್ಲಿ ಶೋಧಿಸಲಾಯಿತು. ಪಂಜಾಬ್ ದೇಶದ ಅತ್ಯಂತ ಸಮೃದ್ಧ ರಾಜ್ಯಗಳಲ್ಲಿ ಒಂದು. ಆ ರಾಜ್ಯದ ಪಾಟಿಯಾಲ ಜಿಲ್ಲೆಯ ಪಟ್ರೌನ್‌ನಲ್ಲಿರುವ ಒಂದು ಖಾಸಗಿ ಆಸ್ಪತ್ರೆಯಲ್ಲಿ ಮೂವತ್ತು ಅಡಿ ಆಳದ ಬಾವಿಯಲ್ಲಿ ಐವತ್ತು ಸತ್ತ ಭ್ರೂಣಗಳು ಸಿಕ್ಕಿದವು. ಅವುಗಳೆಲ್ಲಾ ಸ್ತ್ರೀ ಭ್ರೂಣಗಳೇ ಆಗಿದ್ದವು. ಆಸ್ಪತ್ರೆಯ ಬಳಿಯೇ ಬಾವಿಯಿರುವುದು ಆಕಸ್ಮಿಕವೇನಲ್ಲ. 1994ರಿಂದಲೇ ಭ್ರೂಣದ ಲಿಂಗಪರೀಕ್ಷೆಯನ್ನು ನಿಷೇಧಿಸಿರುವ ಕಾನೂನು ಜಾರಿಯಲ್ಲಿದ್ದರೂ ಸ್ತ್ರೀ ಭ್ರೂಣವನ್ನು ನಿವಾರಿಸುತ್ತಾ ಬರುತ್ತಿರುವ ಪ್ರಯತ್ನಗಳನ್ನು ನಿಯಂತ್ರಿಸಲು ಸಾಧ್ಯವೇ ಆಗಿಲ್ಲ. ಆ ಶೋಧನೆಯ ಸ್ವಲ್ಪ ದಿನಗಳ ನಂತರ ಆ ಆಸ್ಪತ್ರೆಯ ಬಳಿಯ ಮತ್ತೊಂದು ಬಾವಿಯಲ್ಲಿ ಭ್ರೂಣದ ಮೂಳೆಗಳೂ ಕಂಡು ಬಂದವು. ಆದರೆ ಇವುಗಳ ಲಿಂಗ ಯಾವುದೆಂದು ಕಂಡುಬಂದಿಲ್ಲ. ಆ ಆಸ್ಪತ್ರೆಯ ಮಾಲೀಕನನ್ನು ಈಗ ಬಂಧಿಸಲಾಗಿದೆ. ಹಾಗೆಯೇ ಪಂಜಾಬ್ ಸರ್ಕಾರವು ಖಾಸಗಿ ಆಸ್ಪತ್ರೆಗಳ ಮೇಲೆ ತನ್ನ ನಿಯಂತ್ರಣವನ್ನು ಹೇರುತ್ತಿದೆ.

ಈ ಕಥೆಯ ಪ್ರತಿಯೊಂದು ವಿವರವೂ ಅತ್ಯಂತ ಭಯಾನಕವಾದುದಾಗಿದೆ. ಆದರೆ ಉಳಿದ ಯಾವುದೇ ಸಂದರ್ಭದಲ್ಲಿ ಆಗುವಂತೆ ಯಾರಿಗೂ ಬೇಡದ, ಕಾಲಿಗೆ ಕಸವಾದ ಮತ್ತು ದ್ವೇಷಿಸಲು ಅರ್ಹರಾದ ಹೆಣ್ಣುಗಳ ಕಥೆಯಾಗಿ ಸುಮ್ಮನೆ ಮರೆತು ಹೋಗಿ ಬಿಡಬಹುದಾಗಿದೆ.

## ಯಾವ ಬದಲಾವಣೆಯೂ ಇಲ್ಲ

ಲಿಂಗದ ಆಯ್ಕೆಯನ್ನು ಭ್ರೂಣದ ಹಂತದಲ್ಲಿ ನಿರ್ಧರಿಸುವುದರ ವಿರುದ್ಧ ನಡೆದ ಚಳುವಳಿ ಅಂತಹ ಪರಿಣಾಮಕಾರಿ ಬದಲಾವಣೆಯೇನನ್ನೂ ಪಂಜಾಬ್‌ನಲ್ಲಿ ತಂದಿಲ್ಲ. ಪ್ರಧಾನಮಂತ್ರಿಯೇ 'ಒಪ್ಪಿಕೊಳ್ಳಲಾಗದ ಅಪರಾಧ' ಎಂದು ಕರೆದಿದ್ದಾರೆ. ಇಂದು ಪಂಜಾಬ್ ಅದರ ಸಮೃದ್ಧಿಗೆ ಹೆಸರಾಗಿಲ್ಲ, ಆದರೆ ಅದು ದೇಶದಲ್ಲೇ ಅತ್ಯಂತ ಕಡಿಮೆ ಪ್ರಮಾಣದಲ್ಲಿರುವ ಹೆಣ್ಣು : ಗಂಡಿನ ಪ್ರಮಾಣವನ್ನು ತೋರಿಸುವ ರಾಜ್ಯವಾಗಿದೆ. 2001ರ ಜನಗಣತಿಯ ಪ್ರಕಾರ 1000 ಗಂಡು ಮಕ್ಕಳಿಗೆ 793 ಹೆಣ್ಣುಮಕ್ಕಳ ಸಂಖ್ಯೆಯನ್ನು 0-6 ವರ್ಷದ ಮಕ್ಕಳಲ್ಲಿ ಕಾಣಬಹುದಾಗಿದೆ. ಪಟ್ರಾನ್ ಹಳ್ಳಿಯ ಬಾವಿಯಲ್ಲಿ ಕಂಡು ಬಂದ ದೃಶ್ಯದ ಸ್ಥಿತಿಯೇ ಮುಂದುವರಿದರೆ ಇಂದಿನ ಪರಿಸ್ಥಿತಿಯಲ್ಲಿ ಬದಲಾವಣೆ ಕಾಣುವುದು ದುಸ್ಸಾಧ್ಯವೇ ಸರಿ.

ಈ ಸಮಸ್ಯೆಯನ್ನು ನಿವಾರಿಸುವುದಾದರೂ ಹೇಗೆ? ಈ ಸಮಸ್ಯೆಯನ್ನು ಗಂಭೀರವಾಗಿ ಪರಿಗಣಿಸುವುದರ ಅಭಿಪ್ರಾಯದಲ್ಲಿ ಎಲ್ಲಾ ಖಾಸಗಿ ಆಸ್ಪತ್ರೆಗಳನ್ನು ನಿಯಂತ್ರಣಕ್ಕೆ ತಂದುಬಿಡುತ್ತೇವೆ ಎಂಬುದರಿಂದ ಸಮಸ್ಯೆಗೆ ಪರಿಹಾರ ದೊರೆಯುವುದಿಲ್ಲ. ಸಾಮಾನ್ಯವಾಗಿ ಈ ದೇಶದಲ್ಲಿ ಆಗುವಂತೆ ಇಂತಹ ಪರಿಹಾರದಿಂದ ಸಮಸ್ಯೆ ಪಕ್ಕಕ್ಕೆ ಸರಿಯುತ್ತದೆ, ಅಷ್ಟೇ. ಹುಟ್ಟದಿರುವ ತಮ್ಮ ಮಗುವಿನ ಲಿಂಗವನ್ನು ತಿಳಿದುಕೊಳ್ಳಲೇಬೇಕೆಂದು ಪಣತೊಟ್ಟ ತಂದೆತಾಯಿಗಳು ಅದನ್ನ ಹೇಗಾದರೂ ಮಾಡಿ ಸಾಧಿಸಿಯೇ ಬಿಡುತ್ತಾರೆ. ಈ ರಾಜ್ಯದಲ್ಲಿರುವ ಸಂಪತ್ತನ್ನು ನೋಡಿದಾಗ ಗಂಡು ಮಗುವಿನ ಆಸೆಗಾಗಿ ಈ ಜನ ಎಷ್ಟಾದರೂ ಖರ್ಚು ಮಾಡಬಲ್ಲರು ಎಂಬುದಂತೂ ಸತ್ಯ.

ಇನ್ನೂ ಆತಂಕದ ಸಂಗತಿಯೆಂದರೆ, ಲಿಂಗಪರೀಕ್ಷೆಯನ್ನು ಒಪ್ಪಿಕೊಳ್ಳುವ ಜನರ ಸಂಖ್ಯೆ ಗಾಬರಿ ಹುಟ್ಟಿಸುತ್ತದೆ. 'ಪಂಜಾಬ್‌ನಲ್ಲಿ ಸ್ತ್ರೀ ಭ್ರೂಣಹತ್ಯೆ' ಎಂಬ ಸಂಶೋಧನಾ ಪ್ರಬಂಧದಲ್ಲಿ ಅಜೀಂದರ್ ವಾಲಿಯಾ ಪ್ರಕಟಪಡಿಸಿರುವ ಮಾಹಿತಿಗಳು ಹೀಗಿವೆ : ಲೂಧಿಯಾನ, ಬಾಟಿಂಡಾ ಮತ್ತು ಫಿರೋಜ್‌ಪುರ್‌ನ ಮೂರು ಜಿಲ್ಲೆಗಳಲ್ಲಿರುವ ಕೃಷಿಕ ಮತ್ತು ಕೃಷಿಯೇತರ ಸಮುದಾಯಗಳ ಸುಮಾರು 240 ಜನರನ್ನು ಸಂದರ್ಶಿಸಿದಾಗ ದೊರೆತ ಮಾಹಿತಿಗಳು : ಲೂಧಿಯಾನದಲ್ಲಿ 67.50 ಶೇಕಡ ಕೃಷಿಕ ಸಮುದಾಯದವರು ಮತ್ತು ಶೇಕಡ 50 ಕೃಷಿಯೇತರ ಸಮುದಾಯದವರು ಭ್ರೂಣದ ಲಿಂಗಪರೀಕ್ಷೆಯನ್ನು ಸಮರ್ಥಿಸುತ್ತಾರೆ. ಬಾಟಿಂಡಾ ಜಿಲ್ಲೆಯಲ್ಲಿ ಇದಕ್ಕಿಂತ ಸ್ವಲ್ಪ ಕಡಿಮೆ ಸಂಖ್ಯೆಯ ಜನರು ಲಿಂಗ ಪರೀಕ್ಷೆಯನ್ನು ಒಪ್ಪಿಕೊಳ್ಳುತ್ತಾರೆ. ಫಿರೋಜ್‌ಪುರದ ಜನರು ಈ ಎರಡು ಜಿಲ್ಲೆಗಳಿಗಿಂತ ಕಡಿಮೆ ಸಂಖ್ಯೆಯಲ್ಲಿ ಲಿಂಗದ ಪರೀಕ್ಷೆಯನ್ನು ಒಪ್ಪಿಕೊಳ್ಳುತ್ತಾರೆ. ಲೂಧಿಯಾನ ಜಿಲ್ಲೆಯ ಶೇಕಡ 82.97ರಷ್ಟು ಮಂದಿಗೆ ಇಂತಹ ಪರಿಕ್ಷೆಯಲ್ಲಿ ತಪ್ಪೇನೂ ಕಾಣಿಸುವುದಿಲ್ಲ, ವರದಕ್ಷಿಣೆ ಸಮಸ್ಯೆ, ಜೀವನ ವೆಚ್ಚ ಮತ್ತು

ಅದ್ದೂರಿ ವಿವಾಹದ ಖರ್ಚು-ಇವೆಲ್ಲದರ ಮುಂದೆ ಸ್ತ್ರೀಭ್ರೂಣ ಹತ್ಯೆ ಪರಿಹಾರವಾಗಿ ಕಾಣಿಸುತ್ತದೆ. ಬಾಟಿಂಡಾದ ಜನರ ದೃಷ್ಟಿಯಲ್ಲಿ ''ಮಗಳನ್ನು ಬೆಳೆಸುವುದು ಪಕ್ಕದ ಮನೆಯ ಗಿಡಕ್ಕೆ ನೀರು ಸುರಿದಂತೆ''. ಹಾಗೆಯೇ ಫಿರೋಜ್‌ಪುರದ ಜನರೂ ವರದಕ್ಷಿಣೆಯ ಪಿಡುಗೇ ಸ್ತ್ರೀಭ್ರೂಣ ಹತ್ಯೆಗೆ ಕಾರಣ ಎನ್ನುತ್ತಾರೆ.

ಈ ಸಂಶೋಧನೆಯು ಯಾವ ಹೊಸ ಸಂಗತಿಯನ್ನು ತಿಳಿಸುವುದಿಲ್ಲ ಎನ್ನುವುದು ನಿಜವಾದರೂ ದಶಕಗಳಿಂದಲೂ ನಡೆಯುತ್ತಿರುವ ಮಹಿಳೆಯರ ಸಮಸ್ಯೆಗಳ ವಿರುದ್ಧದ ಚಳುವಳಿಗಳಿಂದ ನಮ್ಮ ಸಮಾಜದಲ್ಲಿ ಯಾವುದೇ ಗಮನಾರ್ಹ ಪರಿಣಾಮವುಂಟಾಗಿಲ್ಲದಿರುವುದು ಖೇದದ ಸಂಗತಿ. ಎಲ್ಲಿಯವರೆಗೆ ವರದಕ್ಷಿಣೆ ಪದ್ಧತಿ ಮುಂದುವರೆಯುತ್ತದೋ, ಅಲ್ಲಿಯವರೆಗೆ ಸ್ತ್ರೀಭ್ರೂಣ ಹತ್ಯೆಯ ಸಮಸ್ಯೆಯೂ ಮುಂದುವರಿಯುತ್ತದೆ.

ಆದ್ದರಿಂದ ವರದಕ್ಷಿಣೆಯ ಸಮಸ್ಯೆಯತ್ತಲೇ ವಿಶೇಷ ಗಮನ ಹರಿಸಬೇಕಾದ ಕಾಲ ಈಗ ಬಂದಿದೆ. ಈ ಪದ್ಧತಿ ನಶಿಸಿಹೋಗುವ ಬದಲು ಹೆಚ್ಚುತ್ತಿರುವ ಕೊಳ್ಳುಬಾಕತನದಿಂದ ಇನ್ನೂ ವಿರಾಟ್ ಸ್ವರೂಪವನ್ನು ತಳೆಯುತ್ತಿದೆ. ಗೋಡೆಗಳ ಮೇಲೆ ರಾರಾಜಿಸುವ ಪ್ರತಿಯೊಂದು ಜಾಹೀರಾತಿನ ಫಲಕಗಳೂ ಹಲವಾರು ಬೇಕುಗಳ, ಭ್ರಮಾತ್ಮಕ ಜಗತ್ತಿಗೆ ನಮ್ಮನ್ನು ಕರೆದೊಯ್ಯುತ್ತದೆ. ಮಗನ ಮದುವೆ ಈ 'ಬೇಕು'ಗಳನ್ನು ಗಳಿಸಿಕೊಳ್ಳುವ ಸದವಕಾಶವಾಗಿರುತ್ತದೆ. ಆದ್ದರಿಂದ ವರದಕ್ಷಿಣೆಯೆಂಬುದು ಕಾನೂನಿನ ವಿಷಯವೇ ಅಲ್ಲವೆನ್ನುವಂತೆ ವಿವಾಹದ ಭಾಗವಾಗಿ ಸೇರಿಕೊಂಡುಬಿಟ್ಟಿದೆ.

'ಭಾರತ ಪ್ರಕಾಶಿಸುತ್ತಿದೆ' ಎಂದೆನಿಸಿದರೂ ಅದು ಕೆಲವರಿಗೆ ಅದರಲ್ಲೂ ಹುಡುಗರಿಗೆ ಮಾತ್ರ. ಪಂಜಾಬ್‌ನಲ್ಲಿ ಅಷ್ಟೊಂದು ತೀವ್ರತರವಾಗಿ ಸ್ತ್ರೀಭ್ರೂಣಹತ್ಯೆ ನಡೆಯುತ್ತಿದ್ದರೂ ದೇಶದ ಉಳಿದ ಭಾಗಗಳಲ್ಲಿ ಕೆಲವೆಡೆ ಮಹಿಳೆಯರು ಒಳ್ಳೆಯ ಸಾಧನೆಯನ್ನು ಮಾಡುತ್ತಿದ್ದಾರೆ. ಕಾರ್ಪೊರೇಟ್ ಜಗತ್ತಿನ ಅತ್ಯುನ್ನತ ಹುದ್ದೆಯನ್ನು ಏರಿದ್ದಕ್ಕಾಗಿ ಪೆಪ್ಸಿಕೋಲಾದ ಇಂದಿರಾ ನ್ಯೂಯಿಯನ್ನು ನಮ್ಮ ಪತ್ರಿಕೆಗಳು ಎತ್ತಿ ಕೊಂಡಾಡುತ್ತಿರುವಾಗ ಪಂಜಾಬ್‌ನಲ್ಲಿ ಏನಾಗುತ್ತಿದೆಯೆಂಬುದನ್ನೂ ಅವರು ಬರೆಯಬೇಕಿತ್ತು. ಭವಿಷ್ಯದ ಎಷ್ಟೋ ಇಂದಿರಾಗಳು ಇಲ್ಲಿ ಹುಟ್ಟುವ ಹಕ್ಕನ್ನು ಕಳೆದುಕೊಂಡಿದ್ದಾರೆಂಬುದು ವಾಸ್ತವದ ಕಹಿಸತ್ಯ.

ಕೃಪೆ : ದಿ ಹಿಂದೂ

**CPMG/KA/BGS-8/2006-08** **RNI NO. 45577 / 88**
**Posted at Basavanagudi : P.O. On the 25th/29th of Every Month**
**September-2006**

"Achala" 108, Skyline
Surabhi,
14 - P, Vidyapeeta Road,
BSK III Stage,
Bangalore - 560 085

To :
Smt./Sri